ಸಾಯಣ ಭಾಷ್ಯೋಪೇತ ವಿವರಣಾತ್ಮಕ

# ಪುರುಷ ಸೂಕ್ತ



ಪ್ರಕಾಶಕರು

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ, ಬೃಹನ್ಮಠ

ಚಿತ್ರದುರ್ಗ



...ಂಟನೆಯ ಪುಷ್ಪ





ಲೇಖಕರು

ವೇದ ವೇದಾಂತ ವಿದ್ಯಾ ವಾಚಸ್ಪತಿ

ಟಿ. ಯ್ಯ. ಮಲ್ಲಪ್ಪ, ಬಿ.ಎ., ಎಲ್‌ಎಲ್. ಬಿ.

ರಿಟೈರ್ಡ್ ಹೈಕೋರ್ಟ್ ಜಡ್ಜ್

ಲಲಿತ ಪ್ರಭಾ, ರೇಸ್‌ಕೋರ್ಸ್ ರೋಡ್, ಬೆಂಗಳೂರು–೧



ಪ್ರಕಾಶಕರು

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ, ಬೃಹನ್ಮಠ,

ಚಿತ್ರದುರ್ಗ



ಎಂಟನೆಯ ಪುಷ್ಪ



ಲೇಖಕರು

ವೇದ ವೇದಾಂತ ವಿದ್ಯಾ ವಾಚಸ್ಪತಿ

ಟಿ. ರ್ಯ. ಮಲ್ಲಪ್ಪ, ಬಿ.ಎ., ಎಲ್‌ಎಲ್. ಬಿ.

ರಿಟೈರ್ಡ್ ಹೈಕೋರ್ಟ್ ಜಡ್ಜ್

ಲಲಿತ ಪ್ರಭಾ, ರೇಸ್‌ಕೋರ್ಸ್ ರೋಡ್, ಬೆಂಗಳೂರು–೧

ಬೆಲೆ: ಎರಡು ರೂಪಾಯಿ



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಮುರುಘರಾಜೇಂದ್ರ ಮಲ್ಲಿಕಾರ್ಜುನ
ಮಹಾಸ್ವಾಮಿಗಳವರು

## ಗ್ರಂಥಕರ್ತರು



ವೇದ ವೇದಾಂತ ವಿದ್ಯಾ ವಾಚಸ್ಪತಿ

**ಟಿ. ಯೆಮ್. ಮಲ್ಲಪ್ಪ, ಬಿ.ಎ., ಎಲ್ಎಲ್. ಬಿ.**

ರಿಟೈರ್ಡ್ ಹೈಕೋರ್ಟ್ ಜಡ್ಜ್

# ಸಾಯಣ ಭಾಷ್ಯೋಪೇತ ಪುರುಷಸೂಕ್ತ

## ಪ್ರಕಾಶಕರಾದ ಶ್ರೀ ಜಗದ್ಗುರುಗಳವರ ಆಶೀರ್ವಚನ

ಶ್ರೀ ಮುರುಘೇಶಾಯನಮಃ

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆಯ ಆರನೆಯ ಪುಷ್ಪವಾಗಿ ನಾಸದೀಯ ಸೂಕ್ತ ಗ್ರಂಥವೂ ಏಳನೆಯ ಪುಷ್ಪವಾಗಿ ವಚನೋಪನಿಷತ್ ಗ್ರಂಥವೂ, ಎಂಟನೆಯ ಪುಷ್ಪವಾಗಿ ಪುರುಷಸೂಕ್ತ ಗ್ರಂಥವೂ ಇದೀಗ ಪ್ರಕಟವಾಗಲಿವೆ. ಗ್ರಂಥಕರ್ತರಾದ ಶ್ರೀ ಟಿ. ಯರ್. ಮಲ್ಲಪ್ಪನವರು ವಚನೋಪನಿಷತ್ ಗ್ರಂಥದಲ್ಲಿ ವಚನಗಳಿಗೆ ಸಂವಾದಿಯಾಗಿ ನಾಸದೀಯ ಸೂಕ್ತವನ್ನೂ ಪ್ರಾಸಂಗಿಕವಾಗಿ ಈಶಕೇನೋಪನಿಷತ್ತುಗಳನ್ನೂ ಯಥೋಚಿತ ವ್ಯಾಖ್ಯಾನ ವಿವರಣೆಗಳೊಡನೆ ಸೇರಿಸಿದ್ದಾರೆ. ಗ್ರಂಥದ ಆದಿಯಲ್ಲಿ ವೇದವಾಙ್ಮಯದಿಂದ ವಚನ ವಾಙ್ಮಯದವರೆಗೆ ಆಧ್ಯಾತ್ಮಿಕ ಪ್ರಗತಿಯನ್ನು ಸಪ್ರಮಾಣವಾಗಿ ಸುಂದರವಾಗಿ ನಿರೂಪಿಸಿ, ಅಂತ್ಯದಲ್ಲಿ ಸಿಂಹಾವಲೋಕನವೆಂದು ಸಮಗ್ರ ವಿಷಯಗಳ ವಿವೇಚನೆಯನ್ನು ಬಹು ಮಾರ್ಮಿಕವಾಗಿ, ಹೃದಯಂಗಮವಾಗಿ ಮಾಡಿದ್ದಾರೆ. ಅವರ ವಿಶಿಷ್ಟ ದೃಷ್ಟಿಯ ವಿಚಾರ ವಿಮರ್ಶೆಗಳಲ್ಲಿ ಭಿನ್ನಾಭಿಪ್ರಾಯವುಳ್ಳವರೂ ಸಹಾ ಅವರ ಪಾಂಡಿತ್ಯ ಪ್ರತಿಭೆಗಳಿಗೆ ತಲೆದೂಗಬೇಕು: ಅವರ ಸಾಹಸಸಂಶೋಧನೆಗಳನ್ನು ಗೌರವಿಸಬೇಕು—ಅಷ್ಟು ಗಂಭೀರವಾಗಿದೆ ಅವರ ಅಭ್ಯಾಸ ಅನುಭವಗಳು!

ನಿವೃತ್ತ ನ್ಯಾಯಮೂರ್ತಿಗಳಾಗಿ, ಈ ಅಪರ ವಯಸ್ಸಿನಲ್ಲಿ ಅವರು ಅತಿ ಕ್ಲಿಷ್ಟಗ್ರಂಥವಾದ ಪುರುಷಸೂಕ್ತವನ್ನೂ ಗಹನ ವಿಚಾರಪೂರಿತ ನಾಸದೀಯ ಸೂಕ್ತವನ್ನೂ ಸಾಯಣಭಾಷ್ಯಾದಿ ಆಧಾರಗಳೊಂದಿಗೆ, ತತ್ತ್ವ ಜಿಜ್ಞಾಸು ಗಳಿಗೆ ತೃಪ್ತಿಕರವಾಗಿ ವಿವರಿಸುವ ರೀತಿಯನ್ನು ನೋಡಿದರೆ ಯಾರಿಗೂ ಆಶ್ಚರ್ಯವೂ ಆದರವೂ ಎನಿಸುವುದು ಸಹಜ! ಈ ಅಮೂಲ್ಯ ಗ್ರಂಥಗಳನ್ನು ಶ್ರೀ ಬೃಹನ್ಮಠದ ಆರನೆಯ ಅಧಿಪತಿಗಳಾದ ಮೂರುಸಾವಿರದ ಶ್ರೀ ಗುರು ಪಾದ ಮಹಾಸ್ವಾಮಿಗಳವರ ಪಾದಾರವಿಂದಗಳಿಗೆ ಸಮರ್ಪಿಸಿ ಕೃತಾರ್ಥ ರಾದ ಗ್ರಂಥಕರ್ತರು ಆ ಮಹಾಗುರುವಿನ ಅನುಗ್ರಹದಿಂದ ನೂರುಕಾಲ ಬಾಳಿ ಇನ್ನೂ ಹೆಚ್ಚಿನ ಸಾರಸ್ವತ ಸೇವೆಯನ್ನು ಸಲ್ಲಿಸಲೆಂದು ಹಾರೈಸಲಾಗಿದೆ.

---

# ನಿವೇದನೆ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು ಉತ್ತಮ ಗ್ರಂಥಗಳನ್ನು ಪ್ರಕಟಿಸಿ ಜ್ಞಾನದಾಸೋಗ ಮಾಡುತ್ತಿರುವ ಮಹತ್ಕಾರ್ಯದಲ್ಲಿ, ಸೃಷ್ಟಿವಿಷಯಕವಾದ ಮೂರು ಗ್ರಂಥಗಳನ್ನು ಬರೆಯುವುದರ ಮೂಲಕ ಸೇವೆ ಸಲ್ಲಿಸುವ ಅವಕಾಶವನ್ನು ಕೊಟ್ಟುದು ನನ್ನ ಪುಣ್ಯ ವಿಶೇಷ. ನಾಸದೀಯ ಸೂಕ್ತದಂತೆ ಪುರುಷ ಸೂಕ್ತ ಗ್ರಂಥವನ್ನು ವಚನೋಪನಿಷತ್ತಿನೊಳಗೆ ಸೇರಿಸಬಹುದಾಗಿತ್ತಾದರೂ ಗ್ರಂಥ ವಿಸ್ತಾರ ಭಯದಿಂದ ಹಾಗೆ ಮಾಡಲಾಗಲಿಲ್ಲ. ನಾಸದೀಯ ಸೂಕ್ತ ಪುರುಷಸೂಕ್ತ ಗ್ರಂಥಗಳು ಪ್ರತ್ಯೇಕವಾಗಿ ಮುದ್ರಣವಾಗಿರುವುದು ಅವನ್ನೇ ಓದಬೇಕೆನ್ನುವವರಿಗೆ ಅನುಕೂಲವಾಗಿದೆ.

ಶ್ರೀ ಜಗದ್ಗುರುಗಳ ಮೆಚ್ಚುಗೆಯ ಆಶೀರ್ವಚನವೂ, 'ಸಾವಿರಾರು ವರ್ಷಗಳಿಂದಲೂ ಸಮಸ್ಯೆಯಾಗಿಯೇ ಉಳಿದಿರುವ ನಾಸದೀಯ ಸೂಕ್ತದ ತೊಡಕುಗಳನ್ನು ಬಿಡಿಸಲು ಯತ್ನಿಸಿದುದೇ ಸಾಹಸ; ಸಾಹಸದೊಂದಿಗೆ ವಿಪುಲವಾದ ವೈದುಷ್ಯವೂ ಪ್ರೌಢವಾದ ವಿಚಾರಶಕ್ತಿಯೂ ಸೇರಿದುದು ಯಶಸ್ಸಿಗೆ ಕಾರಣವಾಗಿದೆ'—ಎಂಬ ವಿದ್ಯಾಲಂಕಾರ ಪ್ರೊ॥ S. K. ರಾಮಚಂದ್ರರಾಯರ ಅಭಿಪ್ರಾಯವೂ, ಇಂತಹ ಹುತ್ತಕ್ಕೆ ಕೈಯಿಟ್ಟರೂ ಸರ್ಪದಂಶವಾಗಿಲ್ಲವೆಂಬ ಡಾ॥ ಗೋಕಾಕ್‌ರ ಭರವಸೆಯೂ, ಇದೊಂದು ಅತ್ಯುತ್ತಮ ಗ್ರಂಥವೆಂದು ಪ್ರೋತ್ಸಾಹಿಸಿರುವ ಮಾನ್ಯ ಗುರುದತ್ತರ ಅಭಿಪ್ರಾಯವೂ ಡಾ॥ ಕೃಷ್ಣರಾಯರ ಮೆಚ್ಚುಗೆಯೂ ಪುರುಷಸೂಕ್ತ ಗ್ರಂಥವಿದನ್ನು ಬರೆಯುವುದರಲ್ಲಿ ಪ್ರೋತ್ಸಾಹವನ್ನು ಕೊಟ್ಟವು. ಪುರುಷಸೂಕ್ತ ಗ್ರಂಥ ವಿಷಯದಲ್ಲಿಯೂ ಇತರ ಗ್ರಂಥಗಳ ವಿಷಯದಲ್ಲಿಯೂ ಅಭಿಪ್ರಾಯಗಳನ್ನು ಕೊಟ್ಟು ಪ್ರೋತ್ಸಾಹಿಸಿದ ವಿದ್ವಾಂಸರಿಗೂ, ಗ್ರಂಥವನ್ನು ಚೆನ್ನಾಗಿ ಮುದ್ರಿಸಿಕೊಟ್ಟಿರುವ ಓರಿಯಂಟ್ ಪ್ರೆಸ್‌ನವರಿಗೂ ವಂದನೆಗಳು.

—ಟಿ. ಯರ್ಾ. ಮಲ್ಲಪ್ಪ.

# ಅಭಿಪ್ರಾಯಗಳು

## ಪ್ರಾಚ್ಯವಿದ್ಯಾಲಯಾಧ್ಯಕ್ಷರೂ ಬೆಂಗಳೂರು ವಿಶ್ವವಿದ್ಯಾಲಯದ ಕ್ಯಾಲಿಸನ್. ಕಾಲೇಜಿನ ಪ್ರಾಧ್ಯಾಪಕರೂ ಆದ ವಿದ್ಯಾಲಂಕಾರ ಪ್ರೊ|| ಎಸ್. ಕೆ. ರಾಮಚಂದ್ರರಾಯರು

ನಮ್ಮ ನಾಡಿನ ಪ್ರಸ್ಥಾನದಲ್ಲಿ ಪ್ರಮುಖವಾದ ಪ್ರಕರಣಗಳನ್ನು ಆಯ್ದುಕೊಂಡು. ಅವುಗಳ ವಿಚಾರವಾಗಿ ಪರಂಪರೆಯಿಂದ ಒದಗಿರುವ ವಿಚಾರಸರಣಿಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದೇ ನ್ಯಾಯ ಮೂರ್ತಿ ಶ್ರೀ. ಟಿ. ಎನ್. ಮಲ್ಲಪ್ಪನವರ ಜೀವಿತೋದ್ದೇಶವಾಗಿರುವಂತೆ ತೋರುತ್ತದೆ. ಈಗಾಗಲೇ ಈಶ, ಕೇನ ಉಪನಿಷತ್ತುಗಳನ್ನೂ, ನಾಸದೀಯ ಸೂಕ್ತವನ್ನೂ ವಿಶಿಷ್ಟವಾದ ರೀತಿಯಲ್ಲಿ, ವಿಭಿನ್ನ ವಿಚಾರಧಾರೆಗಳನ್ನು ಕೂಲಂಕಷವಾಗಿ ಪರಾಮರ್ಶೆಮಾಡಿ ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಪಂಡಿತರಿಗೂ ಮಾನ್ಯವಾಗುವಂತೆ, ಆಚಾರ್ಯಪುರುಷರ ಮತ್ತು ದಾರ್ಶನಿಕರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ, ರಚಿಸಿ ಪ್ರಕಟಿಸಿದ್ದಾರೆ. ಈ ಪ್ರಯತ್ನ ದಲ್ಲಿ ಮತ್ತೊಂದು ದಿಟ್ಟಹೆಜ್ಜೆ ಅವರ 'ಪುರುಷಸೂಕ್ತ'.

ವೈದಿಕ ವಾಙ್ಮಯದಲ್ಲಿಯೇ ಪುರುಷಸೂಕ್ತಕ್ಕೆ ವಿಶಿಷ್ಟವಾದ ಸ್ಥಾನವಿದೆ. ಆದರೆ ಈ ಹಿರಿಮೆಯ ರಹಸ್ಯವೇನು ಎನ್ನುವುದು ಎಲ್ಲರಿಗೂ ತಿಳಿದಿಲ್ಲ. ಶ್ರೀ ಮಲ್ಲಪ್ಪನವರ ಈ ಗ್ರಂಥ ಪುರುಷಸೂಕ್ತದ ಸ್ವಾರಸ್ಯವನ್ನೂ ಗಾಂಭೀರ್ಯ ವನ್ನೂ ಚೆನ್ನಾಗಿ ಬೆಳಕಿಗೆ ತಂದಿದೆ.

ಉಳಿದ ತಮ್ಮ ಗ್ರಂಥಗಳಂತೆ, ಇದರಲ್ಲಿಯೂ ಶ್ರೀಯುತರು ಮನೋಜ್ಞ ವಾದ ಸಂವಿಧಾನವನ್ನು ಬಳಸಿದ್ದಾರೆ. ಮೂಲಮಂತ್ರ, ಪದ್ಯಾನುವಾದ, ಸರಳಾನುವಾದ ಇವುಗಳ ಜೊತೆಗೆ ಸಾಯಣ-ಭಾಷ್ಯದಿಂದಲೂ ಆಚಾರ್ಯ ಪುರುಷರ ಮಾತುಗಳಿಂದಲೂ ಪ್ರಸಕ್ತವಾದುದನ್ನು ತಿಳಿಯಪಡಿಸಿ, ತಮ್ಮ ನಿಲುವಿಗೆ ಸಮ್ಮತವೆನಿಸಿದ ವಿವರಣೆಗಳನ್ನು ಕೊಟ್ಟಿದ್ದಾರೆ. ಪುರುಷಸೂಕ್ತ ವನ್ನು ತಾವೇ ಕೂಲಂಕಷವಾಗಿ ಅಭ್ಯಾಸಮಾಡಿ, ಅದರ ಇಂಗಿತವನ್ನು ಅರಿಯಬೇಕೆನ್ನುವವರಿಗೆ ಈ ಗ್ರಂಥ ಉಪಯೋಗವಾಗುವಂತೆ ಬೇರೆ ಯಾವ ಗ್ರಂಥವನ್ನೂ ನಾನು ನೋಡಿಲ್ಲ. ನಮ್ಮ ದರ್ಶನ ವಾಙ್ಮಯದಲ್ಲಿ

ಪುರುಷ ಎನ್ನುವ ಮಾತೂ ಕಲ್ಪನೆಯೂ ಹೇಗೆ ವೈದಿಕ ಸಾಹಿತ್ಯದಲ್ಲಿ ವ್ಯಕ್ತವಾಗಿ ಬೆಳೆದುವು, ಹಂತ-ಹಂತದಲ್ಲಿ ಈ ವಿಚಾರ ಪ್ರಗತಿ ಹೇಗಾಯಿತು ಎನ್ನುವುದನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಯಜ್ಞಪರವಾದ ಮಂತ್ರಗಳು ಪುರುಷಸೂಕ್ತದ ಉದ್ದೇಶಕ್ಕೆ ವಿಭಿನ್ನವಾದುವು ಎಂದು ವಾದಿಸುವಾಗ ಅವರು ಪ್ರತಿಭೆಯನ್ನು ವ್ಯಕ್ತಪಡಿಸಿದ್ದಾರೆ. ಈ ಸೂಕ್ತದ ೬, ೭, ೮, ೯, ೧೫ ಮತ್ತು ೧೬ನೆಯ ಮಂತ್ರಗಳು ಈ ದೃಷ್ಟಿಯಿಂದ ಗ್ರಾಹ್ಯವಲ್ಲ, ಪ್ರಕ್ಷೇಪವಿದ್ದರೂ ಇದ್ದೀತು—ಎನ್ನುವುದು ಶ್ರೀಯುತರ ವಿವೇಚನೆಯಿಂದ ಸ್ಪಷ್ಟವಾಗುತ್ತದೆ.

ಪುರುಷ ಎನ್ನುವ ಪರಮತತ್ತ್ವದಿಂದ ಜಡಜೀವಾತ್ಮಕವಾದ ಜಗತ್ತು ಆವಿರ್ಭೂತವಾಯಿತು; ಇಂದ್ರ-ವಿಶ್ವಕರ್ಮ-ಪ್ರಜಾಪತಿ-ಹಿರಣ್ಯಗರ್ಭ ಇವರಿಂದ ಜಗತ್ತಿನ ಸೃಷ್ಟಿಯಾಯಿತು ಎನ್ನುವುದಕ್ಕಿಂತ ಇದು ಹೆಚ್ಚು ಸಮಂಜಸವಾದ ಕಲ್ಪನೆ—ಇದನ್ನು ಶ್ರೀಯುತ ಮಲ್ಲಪ್ಪನವರು ಎತ್ತಿ ತೋರಿಸಿದ್ದಾರೆ. ಪುರುಷ ಎನ್ನುವ ಮಾತು ಶಿವನಿಗೂ ವಿಷ್ಣುವಿಗೂ ಸಮಾನವಾಗಿಯೇ ಅನ್ವಯವಾಗತಕ್ಕದ್ದು. ಅಷ್ಟೇ ಅಲ್ಲ, ಈ ಉಪಲಕ್ಷಣಗಳನ್ನೂ ಮೀರಿ 'ನಿಷ್ಕಲ ಪರಬ್ರಹ್ಮ'ವನ್ನು ಸೂಚಿಸುತ್ತದೆ ಎಂದು ಶ್ರೀಯುತರು ತೋರಿಸಿದ್ದಾರೆ. ಭಗವದ್ಗೀತೆಯಲ್ಲಿ ಪುರುಷನ ಕಲ್ಪನೆಯನ್ನು ಸ್ವಾರಸ್ಯವಾಗಿ ವಿವೇಚಿಸಿದ್ದಾರೆ. ಕೃಷ್ಣನಿಂದಲೇ ಸ್ಮರಿಸಲ್ಪಟ್ಟ ಪರಮಪುರುಷನು ವ್ಯಕ್ತೋಪಾಸನೆಗೆ ಗುರಿಯಾದ ಪರಮವ್ಯಕ್ತಿ (ಕೃಷ್ಣ) ಯಿಂದ ವಿಭಿನ್ನನಾದವನು, ಅಕ್ಷರಬ್ರಹ್ಮನೆನಿಸಿಕೊಂಡವನು—ಎಂದು ವಾದಿಸಿರುವುದರಲ್ಲಿ ಔಚಿತ್ಯವಿದೆ; ಈ ವಾದವು ಯುಕ್ತಿಯುಕ್ತವೂ ಆಗಿದೆ.

ಅಂತೂ 'ಪುರುಷಸೂಕ್ತ'ಕ್ಕೆ ವಿವರವಾದ ಹಿನ್ನಲೆಯನ್ನು ಒದಗಿಸಿ, ಪ್ರಕ್ರಿಯೆಗಳನ್ನು ಮಥಿಸಿ ತತ್ತ್ವನಿಷ್ಪಾದನೆಯನ್ನು ಪ್ರಯತ್ನಿಸಿ, ಸಮಗ್ರವಾದ ಮತ್ತು ಸ್ವಾರಸ್ಯವಾದ ವಿವರಣೆಯನ್ನು ಇಲ್ಲಿ ಜೋಡಿಸಿದ್ದಾರೆ. ಈ ಉತ್ತಮ ವ್ಯವಸಾಯಕ್ಕೆ ಕನ್ನಡಿಗರು ಋಣಿಗಳಾಗಿದ್ದಾರೆ. ನಮ್ಮ ದರ್ಶನ ಪ್ರಪಂಚದಲ್ಲಿ ಗೊಂದಲ ಹರಿದು ತಿಳಿವೂ ಬೆಳಕೂ ಮೂಡಬೇಕಾದರೆ ಇಂಥ ಪುಸ್ತಕಗಳೇ ದಾರಿದೀವಿಗೆಗಳು.

—ಎಸ್. ಕೆ. ರಾಮಚಂದ್ರರಾವ್.

---

ಶ್ರೀಮನ್ನಿರಂಜನ ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾ ಸ್ವಾಮಿಗಳವರು ಸಿದ್ಧಸಂಸ್ಥಾನ ನಿಡುಸೋಸಿ ಇವರ ಸನ್ನಿಧಿಯಿಂದ—

ವಿದ್ವನ್ಮಣಿಗಳೇ, ತಾವು ಅತ್ಯಂತ ಶ್ರಮವಹಿಸಿ ಬರೆದ ನಾಸದೀಯಸೂಕ್ತದಿಂದೊಡಗೂಡಿದ, ವಚನೋಪನಿಷತ್ ಗ್ರಂಥವನ್ನೂ ಮತ್ತು ಸಾಯಣ ಭಾಷ್ಯೋಪೇತ ಪುರುಷಸೂಕ್ತ ಗ್ರಂಥವನ್ನೂ ಆಮೂಲಾಗ್ರವಾಗಿ ಓದಿ ಮನನಮಾಡಿಕೊಂಡೆವು. ಭಾರತೀಯ ಸಂಸ್ಕೃತಿಯ ಪ್ರಾಚೀನ ಸಾಹಿತ್ಯವೆಂದು ಪರಿಗಣಿಸಲ್ಪಟ್ಟ ವೇದೋಪನಿಷತ್ ಮುಂತಾದ ಉದ್ಗ್ರಂಥಗಳಲ್ಲಿ ನಿಗೂಢವಾಗಿರುವ ಸತ್ಯಸಂಗತಿಗಳನ್ನು ಕನ್ನಡ ಜಿಜ್ಞಾಸುಗಳಿಗೆಲ್ಲ ಸರಿಯಾಗಿ ಪರಿಚಯಮಾಡಿಕೊಡುವ ಮಹತ್ಕಾರ್ಯವನ್ನು ತಮ್ಮೀ ಅಪರವಯಸ್ಸಿನಲ್ಲಿ ನಿರ್ವಹಿಸುತ್ತಿರುವುದು ನಮಗೆಲ್ಲ ತುಂಬ ಹೆಮ್ಮೆಯ ಸಂಗತಿಯಾಗಿದೆ.

ವೈದಿಕ ಸಾಹಿತ್ಯದಲ್ಲಿಯೇ ಅತ್ಯಂತ ಶ್ರೇಷ್ಠವೆಂದೆನಿಸಿದ ಪುರುಷಸೂಕ್ತ ಮತ್ತು ನಾಸದೀಯಸೂಕ್ತ ಇವುಗಳ ಕಾಠಿಣ್ಯವನ್ನು ಸಾಯಣ ಭಾಷ್ಯಾದಿ ಗ್ರಂಥಾಧಾರದಿಂದಲೂ ಮತ್ತು ತಮ್ಮ ಸರಳವಾದ ಹಾಗು ವಿಮರ್ಶಾತ್ಮಕ ವಿವರಣೆಯಿಂದಲೂ ಸಡಿಲಿಸಿ, ತತ್ತ್ವ ಬುಭುಕ್ಷುಗಳಾದ ಕನ್ನಡಿಗರ ಬಾಯಲ್ಲಿ ಅನಾಯಾಸವಾಗಿ ಸುಲಿದಬಾಳೆಯ ಹಣ್ಣಿನಂದದಿ ಕೊಡುವ ಸತ್ಕೀರ್ತಿಗೆ ಪಾತ್ರರಾಗಿರುವಿರಿ. ವೇದದಿಂದ ವಚನದವರೆಗೆ ಸಿಂಹಾವಲೋಕನವೆಂದು ಬರೆದ ವಿಷಯವಂತೂ ವಿದ್ವನ್ಮಾನ್ಯವೆನಿಸುತ್ತದಲ್ಲದೆ, ತಮ್ಮ ಆಳವಾದ ಅಭ್ಯಾಸಗಳನ್ನು ಎತ್ತಿ ತೋರಿಸುವಂತಹುದಾಗಿದೆ.

ನಿಡುಮಾಮಿಡಿ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಸನ್ನಿಧಿಯಿಂದ—

ಶ್ರೀ ಟಿ. ಯಸ್. ಮಲ್ಲಪ್ಪನವರು ವಿಮರ್ಶಿಸಿ ವಿಶ್ಲೇಷಿಸಿದ "ಪುರುಷ ಸೂಕ್ತ" —ಪುಸ್ತಿಕೆಯನ್ನು ಓದಿ ತುಂಬ ಸಂತಸವಾಯಿತು. ತರ್ಕದ ಕೈ ತೂಗಬಲ್ಲದು ಎಂಬುದನ್ನು ಪುಟಪುಟಕ್ಕೂ ಮನಗಂಡೆವು. ಇದು ಜ್ಯೋತಿರ್ಮಯವಾಗಿದೆ ಚೈತನ್ಯದಾಯಕವಾಗಿದೆ ; ಸೃಷ್ಟಿಯು ನಿಜವೂ ಸಹಜವೂ ಆದ ಚಿತ್ರದತ್ತ ದೃಷ್ಟಿಯನ್ನು ಅರಳಿಸಿ ಆಕರ್ಷಿಸುತ್ತದೆ, ಈ ಕಿರು ಹೊತ್ತಿಗೆ. ಯಜ್ಞದ ವಿಷಯದಲ್ಲಿ ಹೊಸ ಪ್ರಜ್ಞೆಯನ್ನು ಮೂಡಿಸುತ್ತದೆ ಇವರ ಕೃತಿ. ಪುರುಷ ಶಬ್ದಾರ್ಥದ ವಿವರಣೆ ಪರಿಣಾಮಕಾರಿಯಾಗಿ ಪ್ರಭಾವ

ಪೂರ್ಣವಾಗಿ, ವೇದೋಪನಿಷತ್ತು-ಸ್ಮೃತಿ-ಗೀತೆಗಳನ್ನು ಅನುಸರಿಸಿ ಬಂದಿದ ಈ ಕೃತಿಯಲ್ಲಿ. ಪುರುಷಸೂಕ್ತದ ಅಂತರಾಳವನ್ನು ಎತ್ತಿತೋರಿದ ಪ್ರಭಾವ ಪೂರ್ಣವಾದ ಪುಸ್ತಿಕೆಯಿದು. ಪುರುಷ ಸೂಕ್ತದ ಕನ್ನಡ ಅನುವಾದ ವಾಚನೀಯವಾಗಿದೆ; ಕೃತಿಕರ್ತರ ಕನ್ನಡತನದ ಕುರುಹಾಗಿದೆ. ಈ ಕೃತಿ ವೇದೋಪನಿಷತ್ತುಗಳ ದೀರ್ಘ ವ್ಯಾಸಂಗದ ಫಲವಾಗಿದೆ.

ಹೊಳೆನರಸಿಪುರದ ಆಧ್ಯಾತ್ಮ ಪ್ರಕಾಶಜ್ಯೋತಿ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಯವರ ಸನ್ನಿಧಿಯಿಂದ— ಪುರುಷ ಸೂಕ್ತವು ಇಂದಿನವರೆಗೂ ಜನಾನುರಾಗವನ್ನು ಗಳಿಸಿದೆ. ಇಲ್ಲಿ ಹೇಳಿರುವ ಪುರುಷನು ತ್ರಿಮೂರ್ತಿಗಿಂತಲೂ ವ್ಯತಿರಿಕ್ತವಾದ ಪರಬ್ರಹ್ಮವೇ ಎಂದು ಸಯುಕ್ತಿಕವಾಕವಾಗಿ ಪ್ರತಿಪಾದಿಸಿರುವುದು ಸ್ತುತ್ಯವಾಗಿದೆ. ಅನೇಕ ವಿದ್ವಾಂಸರ ಶ್ಲಾಘನೆಗೆ ಪಾತ್ರವಾಗಿರುವ ಈ ವಿಚಾರ ಪರಿಪ್ಲುತ ಗ್ರಂಥವು ಶ್ರೀಯುತರ ವೈದಿಕ ವಾಙ್ಮಯ ವಿಚಾರಪರಿಶ್ರಮಕ್ಕೆ ಒಂದು ಕೀರ್ತಿಸ್ತಂಬದಂತಿದೆ.

ರಾಜ ಸೇವಾಸಕ್ತ ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು-ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದು, ವಿಶ್ರಾಂತರಾಗಿರುವ ಶ್ರೀ ಟಿ. ಯನ್. ಮಲ್ಲಪ್ಪನವರಿಂದ ರಚಿತವಾಗಿರುವ "ಸಾಯಣ ಭಾಷ್ಯಾಧಾರೋಪೇತ ವಿವರಣಾತ್ಮಕ ನಾಸದೀಯ ಸೂಕ್ತ"ವನ್ನೂ, "ಸಾಯಣ ಭಾಷ್ಯಾಧಾರೋಪೇತ ಪುರುಷಸೂಕ್ತ"ವನ್ನೂ ಓದಿ ಅತ್ಯಾನಂದವಾಯಿತು. ಶ್ರೀ ಮಲ್ಲಪ್ಪನವರ ಅಗಾಧವಾದ ಪಾಂಡಿತ್ಯ, ಅಭಿನಂದನಾರ್ಹವಾದ ವಿಚಾರಸಂಪತ್ತು, ವಿಪುಲವಾದ ಹೃದಯ ವೈಶಾಲ್ಯ, ಶ್ಲಾಘ್ಯಾರ್ಹವಾದ ತುಲನಾತ್ಮಕ ಸಮಾಲೋಚನೆ, ಜಟಿಲ ಸಂಗತಿಗಳನ್ನು ಸುಲಭಗ್ರಾಹ್ಯವಾಗುವಂತೆ, ಸರಳ ಶೈಲಿಯಲ್ಲಿ ತಿಳಿಸುವ ವಿವರಣಾ ಸಾಮರ್ಥ್ಯ ಮುಂತಾದಗುಣಗಳು ಈ ಉದ್ಗ್ರಂಥಗಳಿಂದ ಮನಮುಟ್ಟಿ ಗೋಚರವಾಗುತ್ತವೆ.

ಸರ್ವದರ್ಶನತೀರ್ಥ ಪಂಡಿತ ಶ್ರೀ ವೈ. ನಾಗೇಶಶಾಸ್ತ್ರಿಗಳು, ಬಳ್ಳಾರಿ—ವೇದೋಪನಿಷದಾದಿಗಳಲ್ಲಿ ಪ್ರತಿಪಾದಿತವಾದ ಪುರುಷಶಬ್ದ ವಿಮರ್ಶೆಯು ಆಳವಾದ ಅನುಭವದಿಂದ ಕೂಡಿದುದಾಗಿ ವಿದ್ವಾಂಸರು ತಲೆದೂಗುವಂತಿರುವುದು. 'ತ್ರ್ಯಂಬಕಂ ಯಜಾಮಹೇ' ಎಂಬ ವೇದಮಂತ್ರದ ವಿದ್ವತ್ಪೂರ್ಣವಿಚಾರವು ಶೈವವೈಷ್ಣವ ವಿವಾದಕ್ಕೆ ಎಡೆಯಿಲ್ಲದಂತೆ ಮಾಡಿದೆ.

DR. M. V. KRISHNA RAO, M.A.,B.T., LITT, F.R.A.S. (LOND) Justice T. N. Mallappa. in his commentary on the Purusha Sukta, has made a great attempt with rare penetrative insight to enter into the deeper meanings and implications of Vedic terminalogy and give the average enquirer a clear vision of Infinitude, in charming simple diction and elequence of expression. This is in the great tradition which he has set for himself and his commentary on the Nasadiya Sukta, which is already popular among the grateful reading public, is a promising forerunner in this direction.

There is a search for the substratam; the details of Upanishadic cosmogony are examined and likewise, the evolution of the different theories held on the subject of the genisis of the universe by the Upanishadic seers. A synoptic view of the problems of Upanishadic thought is taken and theories of Upanishadic cosmogony are divided into two main groups, the Impersonalistic and the personalastic. Water, air, fire, space, Not-Being, Being, Prana as a bio-psycho-metaphysical conception, the idea of a Creator and Atman and the theory of emanation are all examined in detail by the author.

The second chapter in Mr. Mallappa's work reveals an amazing and detailed study of the Upanishadic thought and of the concept of Purusha from the theistic stand point and this has an irresistable appeal to both Saivas and Vaishnavites. The word Purusha is analysed with insight. and the concept imbedded in Sruti and Smriti, in the Upanishats viz, Katopanishat, Prasnopanishat, Taitrayia, Brhadaranyaka and Svetasvatara and the Bhagavadgita are elabora

-ted in the most facinating manner as delightful as it is profound. Particularly interesting is the reference to Parama Purusha in the Bhagavadgita.

The work is well-done, and it is not usual to find a penetrating study of ancient texts in the manner it is accomplished here. Mr. Mallappa's Purusha Sukta should find a much wider Publication and enlighten the masses in India and the people abroad, by its being published in English language

SRI K. GURU DUTT, I.A.S. (Retd) – A fine exposition of the PURUSHA SUKTA is a tribute to Mr. Mallappa's indefatigable scholarship and live enthusiasm which is keeping him young at the age of seventy six. The SUKTA is introduced with a fine verse rendering in Kannada, which brings out the range and spirit of the original. The commentary is lucid and follows Sayana's Bhashya, step by step, not slavishly but criticaly and yet respectfully.

The second section starts with a brief summary of cosmogonic speculation in the Rigveda up to the PURUSHA SUKTA. It is then followed by an attempt to elucidate the significance of the term PURUSHA.... The meaning is clarified with reference to its use in the Gita and major Upanishads, ending up with the Shvetashvatara. The third section takes up the verses for translation and detailed commentary one by one. The last section is in the nature of an Epilogue. The topic is summed up with special reference to the Mandukya Upanishad, the Tripad-vibhuti Mahanarayan Upanishad, and the Nasadiya Sukta.

# ಸಾಯಣಭಾಷ್ಯೋಪೇತ ವಿವರಣಾತ್ಮಕ ಪುರುಷಸೂಕ್ತವು

## ಪ್ರಥಮ ದರ್ಶನ

ಋಗ್ವೇದದ ದಶಮಮಂಡಲದ ಹತ್ತನೆಯ ಸೂಕ್ತವೇ ಪುರುಷ ಸೂಕ್ತವು. ಇದು ಏಳನೆಯ ಅನುವಾಕದಲ್ಲಿ ಆರನೆಯ ಸೂಕ್ತವಾಗಿದೆ. ಇದರಲ್ಲಿ ಹದಿನಾರು ಋಕ್ಕುಗಳಿವೆ. ನಾರಾಯಣಋಷಿಯೇ ಈ ಸೂಕ್ತಕ್ಕೆ ಋಷಿಯು ; ಪರಮಪುರುಷನೇ ದೇವತೆಯು. ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಸಿನದು ; ಉಳಿದ ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು ; ಅನುಕ್ರಮಣಿಕೆಯಲ್ಲಿ 'ಸಹಸ್ರಶೀರ್ಷಾ ಷೋಳಶ ನಾರಾಯಣಃ ಪೌರುಷ ಮಾನುಷ್ಟುಭಂ ತ್ರಿಷ್ಟುಬಂತಂ ತು" ಎಂದು ಹೇಳಿದೆ.

ಅರ್ಚನಾದಿಗಳಲ್ಲಿ ಬಹಳವಾಗಿ ಪ್ರಚಾರದಲ್ಲಿರುವ ಪುರುಷಸೂಕ್ತವು ಋಗ್ವೇದದ ಇತರ ಸೂಕ್ತಗಳಿಗಿಂತ ಹೆಚ್ಚು ಜನಾನುರಾಗವನ್ನು ಗಳಿಸಿದೆ. ಪುರುಷಸೂಕ್ತವನ್ನು ಸಕ್ರಮವಾಗಿ ಪೂಜಾದಿಗಳಲ್ಲಿ ಪಠಿಸುವ ಪುರುಷನಿಗೆ ಸುಪುತ್ರಲಾಭವಾಗುವುದೆಂದು "ಋಗ್ವಿಧಾನ" ಗ್ರಂಥದಲ್ಲಿ ಹೇಳಿದೆ.

> ಆಯುಷ್ಮಂತಂ ಸುತಂ ಸೂತೇ ಯಶೋಮೇಧಾ ಸಮನ್ವಿತಂ ।
> ಧನವಂತಂ ಪ್ರಜಾವಂತಂ ಧಾರ್ಮಿಕಂ ಸಾತ್ತ್ವಿಕಂ ತಥಾ ॥

ಶ್ರದ್ಧಾವಂತರಿಗೆ ಪುರುಷಸೂಕ್ತದಲ್ಲಿ ಅನುರಾಗವಿರುವಂತೆಯೇ ವಿಚಾರ ಪರರಿಗೂ ಈ ಸೂಕ್ತದಲ್ಲಿ ಆಸಕ್ತಿಯಿದೆ. ಏಕೆಂದರೆ ಋಗ್ವೇದದಲ್ಲಿನ ಸೃಷ್ಟಿ ಕಲ್ಪನೆಗಳಲ್ಲಿ ಪುರುಷಸೂಕ್ತದಲ್ಲಿನ ಸೃಷ್ಟಿಕಲ್ಪನೆಯು ಬಹು ಮುಂದುವರೆದು ದಾಗಿದೆ. ಇಂದ್ರನೋ, ಪ್ರಜಾಪತಿಯೋ, ವಿಶ್ವಕರ್ಮನೋ ಅಥವಾ ಇನ್ನಾರೋ ಒಬ್ಬ ವ್ಯಕ್ತಿಯು ಸೃಷ್ಟಿಕ್ರಿಯೆಯನ್ನು ಮಾಡಿದನೆಂದಾಗ, ಅವನು ಎಲ್ಲಿ ನಿಂತು ಯಾವ ಪದಾರ್ಥದಿಂದ ಈ ಸೃಷ್ಟಿಕ್ರಿಯೆಯನ್ನು ಮಾಡಿ ದನು ಎಂಬ ಪ್ರಶ್ನೆಗಳು ಎದ್ದವು. ಸೃಷ್ಟಿಕ್ರಿಯೆಯ ವಿಷಯವಾದ ಈ ಪ್ರಶ್ನೆಗ ಳಿಗೆಲ್ಲ ಸಮಾಧಾನವನ್ನು ಹೇಳುವಂತೆ ಪುರುಷಸೂಕ್ತವು ನಾರಾಯಣಋಷಿಗೆ

ದರ್ಶನವಾದಂತೆ ತೋರುವುದು. ಇಹಪರವೆಲ್ಲವೂ ಪರಮಪುರುಷನೆ. ಹಿಂದಿನದು, ಇಂದಿನದು, ಮುಂದಿನದು ಎಲ್ಲವೂ ಪರಮಪುರುಷನೇ. ಅವ್ನ ಕಿಂಚಿದಂಶವು ಪರಿಣಮಿಸಿ ಜಗತ್ತಾಗಿದೆ ; ಬಹ್ವಂಶವು ಪರವಾಗಿಯೇ ಉಳಿ ಇಹವನ್ನೆಲ್ಲ ಆವರಿಸಿ ಚರಾಚರಾತ್ಮಕ ಜಗತ್ತೆಲ್ಲಕ್ಕೂ ಚೈತನ್ಯದಾಯ ವಾಗಿದೆ. ಪ್ರಾಣಿಗಳು ನೋಡುತ್ತವೆ, ಓಡುತ್ತವೆ, ಹಿಡಿಯುತ್ತವೆ, ಕ ಯುತ್ತವೆ, ಹೇಳುತ್ತವೆ, ಕೇಳುತ್ತವೆ—ಎನ್ನುವುದು ಉಪಚಾರದ ಮಾತ್ರ ನೋಡುವುದು, ಓಡುವುದು, ಹಿಡಿಯುವುದು, ಕಡಿಯುವುದು, ಹೇಳುವು ಕೇಳುವುದು ಇವೆಲ್ಲವೂ ಪ್ರಾಣಿಗಳ ಅಂಗಾಂಗಗಳಲ್ಲಿರುವ ಆ ಪರಮಪುರುಷ ಚೈತನ್ಯಶಕ್ತಿಯೇ. ಎಲ್ಲ ಪ್ರಾಣಿಗಳ ಎಲ್ಲ ಅಂಗಗಳೂ ಅವನ ಅಂಗಗಳ ಆದುದರಿಂದಲೇ ಅವನು ಸಹಸ್ರಶೀರ್ಷನೆಂದೂ, ಸಹಸ್ರಾಕ್ಷನೆಂದೂ, ಸಹಸ್ರ ಪಾದನೆಂದೂ ಪುರುಷಸೂಕ್ತದ ಪ್ರಾರಂಭದಲ್ಲಿಯೇ ಹೇಳಿದೆ. ಇಲ್ಲಿ ಸಹಸ್ರ ವೆಂದರೆ ಅನಂತವೆಂದು ಭಾವ. ಅಂತ್ಯವಿಲ್ಲದಷ್ಟು ಅಂಗಗಳುಳ್ಳವನೆಂದು ಅ ಪ್ರಾಯ. ಹೀಗೆ ಪುರುಷನು ಎಲ್ಲವನ್ನೂ ಆವರಿಸಿ, ಎಲ್ಲಕ್ಕೂ ಚೈತನ್ಯದಾಯ ನಾಗಿ, ಎಲ್ಲಕ್ಕೂ ಆಧಾರಭೂತನಾಗಿ, ಎಲ್ಲವನ್ನೂ ಆಳುವನು. ಬಹ್ವಂ ದಿಂದ ನಿರ್ಲಿಪ್ತನಾಗಿದ್ದರೂ ಕಿಂಚಿದಂಶದಿಂದ ಅವನು ಚರಾಚರಾತ್ಮ ಪ್ರಪಂಚವಾಗುವುದು ಎಂದೋ ಒಂದು ಬಾರಿಯಲ್ಲ. ಸೃಷ್ಟಿಸ್ಥಿತಿಲಯ ಕಾರ್ಯಗಳು ಮತ್ತೆ ಮತ್ತೆ ಆಗುತ್ತಲೇ ಇರುತ್ತವೆ ಸೃಷ್ಟಿಕ್ರಿಯೆಯ ಪ್ರಾರಂಭವಾಗಲು ಮೊದಲು ಹೊರಹೊಮ್ಮುವುದು, ವಿವಿಧವಾಗಿ ರಾರಾ ಸುವ ಬ್ರಹ್ಮಾಂಡ ದೇಹ ಮತ್ತು ಅದರೊಳಗಿನ 'ವಿರಾಟ್' ಪುರುಷ ವಿರಾಟ್‌ಪುರುಷನಿಂದಲೇ ದೇವತಿರ್ಯಙ್ಮನುಷ್ಯಾದಿಗಳು ಹೊರಹೊಮ್ಮು ವುವು. ಭೂಮಿಯೂ ಭೌತಿಕಶರೀರಗಳು ಅದರಿಂದಲೇ ಹೊರಹೊಮ್ಮುವುವ ಗರಿಂದ ಆನೆಯ ಮಂತ್ರಗಳ ಸಾರಾಂಶವಿದು.

ಇಲ್ಲಿನವರೆಗಿನ ಸೃಷ್ಟಿಗೆ ಪೂರ್ವಸೃಷ್ಟಿಯೆಂದು ಹೆಸರು. ಆರನೆಯ ಮಂತ್ರದಿಂದ ಪ್ರಾರಂಭವಾಗಿ ಹೇಳುವ ಸೃಷ್ಟಿಗೆ ಉತ್ತರಸೃಷ್ಟಿಯೆಂದು ಹೆಸರು. ಯಜ್ಞಗಳು ಆಚರಣೆಯಿಲ್ಲದ ಇಂದಿನ ಕಾಲದಲ್ಲಿ ಅವುಗಳಿಗೆ ಹಿಂದೆ ಇದ್ದ ಪ್ರಾಮುಖ್ಯತೆವನ್ನು ಈಗ ಊಹಿಸಲಾಗುವುದಿಲ್ಲ. ಸೂರ್ಯನು ಹುಟ್ಟಿ ಬೆಳಕು ಹರಿಯುವುದೂ ಯಜ್ಞದಿಂದಲೇ ಎಂದು ನಂಬಿದ್ದ

ಕಾಲವದು. ಆದುದರಿಂದ ಸೃಷ್ಟಿಕಾರ್ಯವು ಯಜ್ಞದಿಂದಲೇ ಆಗುವುದೆಂಬ ಭಾವನೆ ಬಂದುದು ಸ್ವಾಭಾವಿಕವೆ. ಪೂರ್ವಸೃಷ್ಟಿಯಲ್ಲಿ ಈ ಭಾವನೆ ಬರಲು ಸಾಧ್ಯವಿರಲಿಲ್ಲ ; ಏಕೆಂದರೆ ಪರಮಪುರುಷನ ಹೊರತು ಮತ್ತೊಂದು ಇಲ್ಲದ ಕಾಲವದು. ವಿರಾಟ್ ಎನಿಸಿದ ಬ್ರಹ್ಮಾಂಡಪುರುಷನೂ, ದೇವತೆಗಳೂ ಹುಟ್ಟಿದ ಅನಂತರ ಯಜ್ಞಪಶುವು, ಯಜ್ಞ ಮಾಡುವವರೂ ದೊರೆತರು. 'ವಿರಾಟ್'ಪುರುಷನನ್ನೇ ಯಜ್ಞಪಶುವನ್ನಾಗಿಯೂ, ದೇವತೆಗಳನ್ನು ಯಜ್ಞ ಕರ್ತೃಗಳನ್ನಾಗಿಯೂ ಭಾವಿಸಲಾಯಿತು ಮುಂದಿನ ಸೃಷ್ಟಿಗಾಗಿ ದೇವತೆಗಳು ಮಾಡಿದ ಮಾನಸಿಕ ಯಜ್ಞದ ವಿಷಯವು ಆರು ಏಳು ಮತ್ತು ಹದಿನೈದನೆಯ ಮಂತ್ರಗಳಲ್ಲಿ ಹೇಳಿದೆ. ವಿರಾಟ್‌ಪುರುಷನು ಆಹುತಿಯಾದ ಈ ಯಜ್ಞದಲ್ಲಿ ಹಕ್ಕಿಗಳೂ, ಕಾಡಿನಲ್ಲಿಯೂ ಊರಿನಲ್ಲಿಯೂ ಇರುವ ಪ್ರಾಣಿಗಳೂ, ನಾಲ್ಕು ವೇದಗಳೂ, ಅಶ್ವಗಳೂ, ಗೋವುಗಳೂ, ಆಡು ಕುರಿಗಳೂ ಹುಟ್ಟಿದವು. ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣರೂ, ಭುಜಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಹುಟ್ಟಿದರು. ಅವನ ಮನಸ್ಸಿನಿಂದ ಚಂದ್ರನೂ, ಕಣ್ಣುಗಳಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ, ಪ್ರಾಣದಿಂದ ವಾಯುವೂ, ನಾಭಿಯಿಂದ ಅಂತರಿಕ್ಷವೂ, ಶಿರಸ್ಸಿನಿಂದ ದ್ಯುಲೋಕವೂ, ಪಾದದಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ ಹುಟ್ಟಿದವು. ದೇವತೆಗಳು ಮಾಡಿದ ಯಜ್ಞದಿಂದ ಸೃಷ್ಟಿಯಾಯಿತೆಂದಮೇಲೆ ಯಜ್ಞವೇ ಮಾನವರ ಪ್ರಥಮ ಧರ್ಮವಾಗಿ ಸ್ವರ್ಗವನ್ನು ಪಡೆಯಲು ಮಾರ್ಗವಾಯಿತು. ಪುರುಷ ಸೂಕ್ತದ ಈ ವಿವರಣೆಯು ಈ ಕೆಳಗೆ ಕೊಟ್ಟಿರುವ ಪದ್ಯಾನುವಾದದಿಂದ ಪುರುಷಸೂಕ್ತದ ಮಂತ್ರಗಳ ಪರಿಚಯವಾಗಲು ಸಹಾಯ ಮಾಡುವುದು. ಇದು ಪ್ರಥಮ ದರ್ಶನ. ವಿಶೇಷ ವಿಷಯ ವಿವರಣೆಗಳು ದ್ವಿತೀಯ ದರ್ಶನ ದಲ್ಲಿ ಗೋಚರಿಸುವುವು. ಮೂಲವನ್ನು ಕೂಲಂಕಷವಾಗಿ ಅಭ್ಯಾಸಮಾಡ ಬೇಕೆನ್ನುವವರಿಗೆ ಸಹಾಯವಾಗಲು, ತೃತೀಯ ದರ್ಶನದಲ್ಲಿ ಮೂಲ, ಪ್ರತಿ ಪದಾರ್ಥ, ಪದ್ಯಾನುವಾದ, ಸರಳಾನುವಾದ, ಸಾಯಣಭಾಷ್ಯಾಧಾರ ಗಳೊಡನೆ ವಿಮರ್ಶಾತ್ಮಕ ವಿವರಣೆಗಳಿವೆ.

ಪುರುಷಸೂಕ್ತ—

ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥ ೧ ॥

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥

ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ ಪುನಃ ।
ತತೋ ವಿಷ್ವಙ್ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥

ತಸ್ಮಾದ್ವಿರಾಳಜಾಯತ, ವಿರಾಜೋ ಅಧಿ ಪೂರುಷಃ ।
ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ೫ ॥

ಕಾಲವದು. ಆದುದರಿಂದ ಸೃಷ್ಟಿಕಾರ್ಯವು ಯಜ್ಞದಿಂದಲೇ ಆಗುವುದೆಂಬ ಭಾವನೆ ಬಂದುದು ಸ್ವಾಭಾವಿಕವೆ. ಪೂರ್ವಸೃಷ್ಟಿಯಲ್ಲಿ ಈ ಭಾವನೆ ಬರಲು ಸಾಧ್ಯವಿರಲಿಲ್ಲ ; ಏಕೆಂದರೆ ಪರಮಪುರುಷನ ಹೊರತು ಮತ್ತೊಂದು ಇಲ್ಲದ ಕಾಲವದು. ವಿರಾಟ್ ಎನಿಸಿದ ಬ್ರಹ್ಮಾಂಡಪುರುಷನೂ, ದೇವತೆಗಳೂ ಹುಟ್ಟಿದ ಅನಂತರ ಯಜ್ಞಪಶುವು, ಯಜ್ಞ ಮಾಡುವವರೂ ದೊರೆತರು. 'ವಿರಾಟ್'ಪುರುಷನನ್ನೇ ಯಜ್ಞಪಶುವನ್ನಾಗಿಯೂ, ದೇವತೆಗಳನ್ನು ಯಜ್ಞ ಕರ್ತೃಗಳನ್ನಾಗಿಯೂ ಭಾವಿಸಲಾಯಿತು ಮುಂದಿನ ಸೃಷ್ಟಿಗಾಗಿ ದೇವತೆಗಳು ಮಾಡಿದ ಮಾನಸಿಕ ಯಜ್ಞದ ವಿಷಯವು ಆರು ಏಳು ಮತ್ತು ಹದಿನೈದನೆಯ ಮಂತ್ರಗಳಲ್ಲಿ ಹೇಳಿದೆ. ವಿರಾಟ್‌ಪುರುಷನು ಆಹುತಿಯಾದ ಈ ಯಜ್ಞದಲ್ಲಿ ಪಕ್ಕಿಗಳೂ, ಕಾಡಿನಲ್ಲಿಯೂ ಊರಿನಲ್ಲಿಯೂ ಇರುವ ಪ್ರಾಣಿಗಳೂ, ನಾಲ್ಕು ವೇದಗಳೂ, ಅಶ್ವಗಳೂ, ಗೋವುಗಳೂ, ಆಡು ಕುರಿಗಳೂ ಹುಟ್ಟಿದವು. ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣರೂ, ಭುಜಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಹುಟ್ಟಿದರು. ಅವನ ಮನಸ್ಸಿನಿಂದ ಚಂದ್ರನೂ, ಕಣ್ಣುಗಳಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ, ಪ್ರಾಣದಿಂದ ವಾಯುವೂ, ನಾಭಿಯಿಂದ ಅಂತರಿಕ್ಷವೂ, ಶಿರಸ್ಸಿನಿಂದ ದ್ಯುಲೋಕವೂ, ಪಾದದಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ ಹುಟ್ಟಿದವು. ದೇವತೆಗಳು ಮಾಡಿದ ಯಜ್ಞದಿಂದ ಸೃಷ್ಟಿಯಾಯಿತೆಂದಮೇಲೆ ಯಜ್ಞವೇ ಮಾನವರ ಪ್ರಥಮ ಧರ್ಮವಾಗಿ ಸ್ವರ್ಗವನ್ನು ಪಡೆಯಲು ಮಾರ್ಗವಾಯಿತು. ಪುರುಷ ಸೂಕ್ತದ ಈ ವಿವರಣೆಯು ಈ ಕೆಳಗೆ ಕೊಟ್ಟಿರುವ ಪದ್ಯಾನುವಾದದಿಂದ ಪುರುಷಸೂಕ್ತದ ಮಂತ್ರಗಳ ಪರಿಚಯವಾಗಲು ಸಹಾಯ ಮಾಡುವುದು. ಇದು ಪ್ರಥಮ ದರ್ಶನ. ವಿಶೇಷ ವಿಷಯ ವಿವರಣೆಗಳು ದ್ವಿತೀಯ ದರ್ಶನ ದಲ್ಲಿ ಗೋಚರಿಸುವುವು. ಮೂಲವನ್ನು ಕೂಲಂಕಷವಾಗಿ ಅಭ್ಯಾಸಮಾಡ ಬೇಕೆನ್ನುವವರಿಗೆ ಸಹಾಯವಾಗಲು, ತೃತೀಯ ದರ್ಶನದಲ್ಲಿ ಮೂಲ, ಪ್ರತಿ ಪದಾರ್ಥ, ಪದ್ಯಾನುವಾದ, ಸರಳಾನುವಾದ, ಸಾಯಣಭಾಷ್ಯಾಧಾರ ಗಳೊಡನೆ ವಿಮರ್ಶಾತ್ಮಕ ವಿವರಣೆಗಳಿವೆ.

ಯತ್ ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥

ಸಪ್ತಾಸ್ಯಾಸನ್ ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಂ ॥ ೧೫ ॥

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥

ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಂ ।
ಪಶೂನ್ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ಗ್ರಾಮ್ಯಾಶ್ಚ ಯೇ ॥ ೮ ॥

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ೯ ॥

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।
ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ೧೦ ॥

ನೆರೆಗೈದುದಾಗಲಾ ದೇವತತಿ ಯಜ್ಞಮಂ ।
ಪುರುಷನವನೇ ಹವಿಸ್ಸೆಂಬ ಸಂಕಲ್ಪದಿಂ ।
ಪರಿಕಿಸಲ್ ಸಮಿತ್ತಾಯ್ತು ಗ್ರೀಷ್ಮಋತು ವಲಂ ।
ಶರದೃತವು ಹವಿಸ್ಸಾಯ್ತಾಜ್ಯಮೆನೆ ವಸಂತಂ ॥ ೬ ॥

ಯಜ್ಞಕ್ಕೆ ಪರಿಧಿಗಳು ಸಪ್ತಛಂದಸ್ಸುಗಳು ।
ಯಜ್ಞದ ಸಮಿತ್ತುಗಳು ಮೂರೇಳು ತತ್ತ್ವಗಳು ।
ಯಜ್ಞದಾ ಯೂಪಕ್ಕೆ ದೇವತೆಗಳೆಂಬವರ್ ।
ಯಜ್ಞ ಸಾಧನ ಪುರುಷ ಪಶುವನ್ನು ಕಟ್ಟಿದರ್ ॥ ೧೫ ॥

ಆವನವ ಜನಿಸಿದನೊ ಸೃಷ್ಟಿಗುಂ ಪೂರ್ವದೊಳ್ ।
ಆ ವಿರಾಟ್‌ಪುರುಷನಂ ಸ್ಥಾಪಿಸುತೆ ಬರ್ಹಿಯೊಳ್ ।
ದೇವತೆಗಳುಂ ಸಾಧ್ಯರುಂ ಮತ್ತೆ ಋಷಿಗಳುಂ ।
ಭಾವಿಸಲ್ ಸಂಪ್ರೋಕ್ಷಿಸಿ ಗೈದರ್ ಯಾಗಮಂ ॥ ೭ ॥

ಹುಟ್ಟಿದುದು ದಧ್ಯಾಜ್ಯ ಸರ್ವಹುತ್ ಯಜ್ಞದಿಂ ।
ಹುಟ್ಟಿದುದು ಗಾಳಿಯೊಳ್ ಚರಿಸುವ ವಿಹಂಗಮಂ ।
ಹುಟ್ಟಿದುದು ಕಾಡಿನೊಳ್ ಜೀವಿಸುವ ಮೃಗಕುಲಂ ।
ಹುಟ್ಟಿದುದು ಹಳ್ಳಿಯೊಳ್ ಬದುಕುವಾ ಪಶುಕುಲಂ ॥ ೮ ॥

ಹುಟ್ಟಿದುದು ಸರ್ವಹುತ ಯಜ್ಞದಿಂ ಋಗ್ವೇದ ।
ಹುಟ್ಟಿದುದು ಯಜ್ಞಮದರಿಂದಲೆ ಯಜುರ್ವೇದ ।
ಹುಟ್ಟಿದುದು ಸಾಮವೇದಂ ಯಜ್ಞದಿಂದಲೇ ।
ಹುಟ್ಟಿದುದು ಛಂದಸ್ಸು ಯಜ್ಞಮದರಿಂದಲೇ ॥ ೯ ॥

ಅದರಿಂದ ಉತ್ಪನ್ನವಾದವಾ ಕುದುರೆಗಳು ।
ಮೊದಲೆರಡು ಸಾಲುಗಳ ಹಲ್ಲಿನ ಪ್ರಾಣಿಗಳು ।
ಅದರಿಂದಲೇ ಮತ್ತೆ ಹುಟ್ಟಿದವು ಗೋವುಗಳು ।
ಅದರಿಂದ ಹುಟ್ಟಿದವು ಅಜಜಾತಿ ಜಂತುಗಳು ॥ ೧೦ ॥

ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।
ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ
॥ ೧೧ ॥

ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ
॥ ೧೨ ॥

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ ೧೩ ॥

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾ ಅಕಲ್ಪಯನ್
॥ ೧೪ ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ
ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ
ಸಾಧ್ಯಾಃ ಸಂತಿ ದೇವಾಃ ॥ ೧೫ ॥

ಆವ ತೆರದಿಂ ವಿಭಾಗಿಸಿದರಾ ಪುರುಷನಂ ।
ಆವುದೆಂದೆಂಬರಾ ಪುರುಷನಾವದನಮುಂ ।
ಆವುದೆಂದೆಂಬರಾ ಪುರುಷನಾ ಭುಜಗಳಂ ।
ಆವುವೆಂಬರವನಾ ತೊಡೆಗಳಂ ಪದಗಳಂ ॥ ೧೧ ॥

ಪುರುಷನಾ ವದನದಿಂ ಬ್ರಾಹ್ಮಣರ್ ಜನಿಸಿದರ್ ।
ಪುರುಷನಾ ಭುಜಗಳಿಂ ಕ್ಷತ್ರಿಯರ್ ಜನಿಸಿದರ್ ।
ಪುರುಷನಾ ತೊಡೆಗಳಿಂ ವೈಶ್ಯಜನರುದಿಸಿದರ್ ।
ಪುರುಷನಾ ಪದಗಳಿಂ ಶೂದ್ರಜನರುದಿಸಿದರ್ ॥ ೧೨ ॥

ಪುಟ್ಟಿದಂ ಚಂದ್ರಮುಂ ಪುರುಷನಾ ಮನಸಿನಿಂ ।
ಪುಟ್ಟಿದಂ ದಿನಕರಂ ಪುರುಷನಾ ಕಣ್ಣಿನಿಂ ।
ಪುಟ್ಟಲಿಂದ್ರಾಗ್ನಿಗಳ್ ಪುರುಷನಾ ವದನದಿಂ ।
ಪುಟ್ಟಿದುದು ವಾಯುವದು ಪುರುಷನಾ ಪ್ರಾಣದಿಂ ॥ ೧೩ ॥

ಪುರುಷನ ಶರೀರದಿಂ ಪುಟ್ಟಿದವು ಲೋಕಗಳ್ ।
ಶಿರಸ್ಸಿಂ ದ್ಯುಲೋಕಂ ಶ್ರೋತ್ರದಿಂ ದಿಕ್ಕುಗಳ್ ।
ಹೊರಹೊಮ್ಮಿತಂತರಿಕ್ಷಮುದವನ ಹೊಕ್ಕುಳಿಂ ।
ಧರಣಿಮಂಡಲಂ ಪುಟ್ಟಿದುದು ಪಾದಂಗಳಿಂ ॥ ೧೪ ॥

ದೇವತೆಗಳರ್ಚಿಸಲ್ ಯಜ್ಞದಿಂ ಯಜ್ಞಮಂ ।
ಆವುದಂ ಗೈದರಾಯ್ತದೇ ಪ್ರಥಮ ಧರ್ಮಂ ।
ದೇವತೆಗಳುಂ ಸಾಧ್ಯರುಮಿರ್ಪಾ ನಾಕಮಂ ।
ತಾವುಂ ಪಡೆವರಂತೆ ನಡೆವ ಮಹಿಮರ್ ವಲಂ ॥ ೧೫ ॥

## ದ್ವಿತೀಯ ದರ್ಶನ

### ಋಗ್ವೇದದ ಸೃಷ್ಟಿಕಲ್ಪನೆಯಲ್ಲಿ ಪುರುಷಸೂಕ್ತದವರೆಗೆ ಪ್ರಗತಿ

ಆರ್ಯಋಷಿಗಳ ಮನಸ್ಸನ್ನು ಪ್ರಪ್ರಥಮವಾಗಿ ಚಕಿತಗೊಳಿಸಿದ ಪ್ರಶ್ನೆಯು ಸೃಷ್ಟಿವೈಚಿತ್ರವನ್ನು ಸೃಷ್ಟಿಸಿದ ಮತ್ತು ಅವರಿಗೆ ಅನ್ನಪಾನೀಯ ಗಳನ್ನು ಒದಗಿಸಿ ಕಾಪಾಡುತ್ತಿದ್ದ ಮಾತಾಪಿತೃಗಳಾರು ಎಂಬುದೇ. ಹಸಿದ ಒಡಲಿಗೆ ಆಹಾರವನ್ನು ಒದಗಿಸುವ ಭೂಮಿತಾಯಿಯೇ ಮಾತೃ. ಬೆಳೆಗಳು ಬೆಳೆಯಲು ಮಳೆಯನ್ನೂ, ಬಿಸಿಲು ಬೆಳಕುಗಳನ್ನೂ ಒದಗಿಸುವ ಆಕಾಶವೇ ಪಿತೃ—ಎಂದು ಅವರು ಭಾವಿಸಿದುದು ಸ್ವಾಭಾವಿಕವೇ. ಆದುದರಿಂದಲೇ ಋಗ್ವೇದದ ೧-೮೯-೪ನೆಯ ಮಂತ್ರದಲ್ಲಿ "ತನ್ಮಾತಾ ಪೃಥಿವೀ ತತ್ ಪಿತಾ ದ್ಯೌಃ" ಎಂದು ಹೇಳಿದೆ. ಋಗ್ವೇದದ ೧೦-೧೧೦-೯ನೆಯ ಮಂತ್ರ ದಲ್ಲಿ "ಇಮೇ ದ್ಯಾವಾ ಪೃಥಿವೀ ಜನಿತ್ರೀ" ಎಂದು ಹೇಳಿದೆ. ಅನಂತರ ದ್ಯಾವಾ ಪೃಥಿವಿಗಳನ್ನೇ ಸೃಷ್ಟಿಸಿದವರು ಯಾರು ? ಏತರಿಂದ ಅವರು ಸೃಷ್ಟಿಸಲ್ಪಟ್ಟರು ? ಎಂಬ ಪ್ರಶ್ನೆಗಳು ಎದುರಾದವು. "ಕಿಂ ಸ್ವಿದ್ ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ ?" ಎಂದರೆ ಯಾವ ವನದ ಯಾವ ವೃಕ್ಷದಿಂದ ದ್ಯಾವಾ ಪೃಥಿವಿಗಳು ನಿರ್ಮಿ ಸಲ್ಪಟ್ಟವು ?— ಎಂಬ ಪ್ರಶ್ನೆಯು ಋಗ್ವೇದದ ೧೦-೩೧-೭ನೆಯ ಮಂತ್ರದಲ್ಲಿ ಎದ್ದಿದೆ. ಋಗ್ವೇದದ ೧೦-೫೪-೩ನೆಯ ಮಂತ್ರದಲ್ಲಿ ದ್ಯಾವಾ ಪೃಥಿವಿಗಳನ್ನು ಒಟ್ಟಿಗೆ ಇಂದ್ರನು ಅವನ ಶರೀರದಿಂದಲೇ ನಿರ್ಮಿಸಿದನೆಂದು ಹೇಳಿದೆ :

> ಕ ಉ ನು ತೇ ಮಹಿಮನಃ ಸಮಸ್ಯಾಸ್ಮತ್ ಪೂರ್ವ ಋಷಯೋಽಂ ತಮಾಪುಃ।
> ಯನ್ಮಾತರಂ ಚ ಪಿತರಂ ಚ ಸಾಕಮ ಜನಯಥಾಸ್ತನ್ವಃ ಸ್ವಾಯಾಃ ||[1]

---

ಅರ್ಥ—

1. ಯತ್—ಯಾವ ನಿನ್ನ ಮಹಿಮೆಯಿಂದ, ಮಾತರಂ—ಪೃಥ್ವಿಯನ್ನೂ, ಪಿತರಂ—ದ್ಯುಲೋಕವನ್ನೂ, ಸಾಕಂ—ಒಟ್ಟಿಗೆ, ಸ್ವಾಯಾಃ—ನಿನ್ನ, ತನ್ವಃ—ಶರೀರ ದಿಂದ, ಅಜನಯಥಾಃ—ಉತ್ಪನ್ನ ಮಾಡಿದೆಯೋ ಆ, ತೇ—ನಿನ್ನ, ಸಮಸ್ಯ-

ಋಗ್ವೇದದ ೨-೧೫-೩ನೆಯ ಮಂತ್ರದಲ್ಲಿ ಇಂದ್ರನು ಸೃಷ್ಟಿಕಾರ್ಯ ವನ್ನು ಮಾಡುವುದನ್ನು ವಿವರಿಸಲಾಗಿದೆ :

ಸದ್ಮೇವ ಪ್ರಾಚೋ ವಿ ಮಿಮಾಯ ಮಾನೈರ್ವಜ್ರೇಣ ಖಾನ್ಯತೃಣನ್ನದೀನಾಮ್ ।
ವೃಥಾ ಸೃಜತ್ ಪಥಿಭಿರ್ದೀರ್ಘಯಾಥೈಃ ಸೋಮಸ್ಯತಾ ಮದ
ಇಂದ್ರಶ್ಚಕಾರ ॥ 1

ಆದರೆ ಇಂದ್ರನ ಅಸ್ತಿತ್ವವನ್ನೇ ಕೆಲವರು ಪ್ರಶ್ನಿಸುವ ಕಾಲವು ಬಂದಿ

---

ಸಂಪೂರ್ಣವಾದ, ಮಹಿಮನಃ-ಮಹಿಮೆಯ, ಅಂತಂ-ತುದಿಯನ್ನು, ಅಸ್ಮತ್-ನಮ್ಮಲ್ಲಿ, ಪೂರ್ವ ಋಷಯಃ-ಶ್ರೇಷ್ಠರಾದ, ಋಷಿಗಳು, ತೇ-ಯಾರು ತಾನೆ, ಆಪುಃ-ಹೊಂದಿದ್ದಾರೆ?

ಸಾಯಣಭಾಷ್ಯಾಧಾರ—

ಹೇ ಇಂದ್ರ, ತೇ ತವ, ಮಹಿಮನೋ ಮಹಿಮ್ನಃ, ಸಮಸ್ಯ ಸರ್ವಸ್ಯಾಪಿ, ಅಂತಂ ಪಾರಂ, ಅಸ್ಮತ್ ಅಸ್ಮತ್ತಃ, ಪೂರ್ವಋಷಯಃ ಕ ಆಪುಃ ಪ್ರಾಪ್ನುವನ್; ದ್ಯೌಃ ಪಿತಾ ಪೃಥಿವೀ ಮಾತೇತಿ ಹಿ ಶ್ರುತಂ; ತೇ ಉಭೇ ಅಪಿ, ಸಾಕಂ ಸಹೈವ, ಸ್ವಾಯಾಃ ತನ್ವಃ ಸ್ವಕೀಯಾತ್ ಶರೀರಾತ್ ಅಜನಯಥಾಃ ಉತ್ಪಾದಯಃ; ಅತಃ ನಾಪುಃ ಇತಿ ಸಂಬಂಧಃ.

ಅರ್ಥ—

1. ಸದ್ಮ ಇವ ಮಾನೈಃ-ಯಜ್ಞಗೃಹವನ್ನು ಅಳೆದು ನಿರ್ಮಿಸುವಂತೆ ಪ್ರಾಚಃ-ಪೂರ್ವ ದಿಕ್ಕುಗಳನ್ನು, ವಿ ಮಿಮಾಯ-ಚೆನ್ನಾಗಿ ಅಳೆದುನಿರ್ಮಿಸಿದನು. ನದೀನಾಂ-ನದಿಗಳಿಗೆ, ಖಾನಿ-ಹರಿಯುವ ದ್ವಾರಗಳನ್ನು, ವಜ್ರೇಣ-ವಜ್ರಾಯುಧದಿಂದ, ಅತೃಣತ್-ಕೊರೆದನು. ದೀರ್ಘಯಾಥೈಃ-ಬಹುಕಾಲ ಪ್ರವಹಿಸುವ, ಪಥಿಭಿಃ-ಮಾರ್ಗಗಳಿಂದ, ವೃಥಾ-ನಿರಾಯಾಸವಾಗಿ ಪ್ರವಹಿಸುವಂತೆ, ಅಸೃಜತ್-ಸೃಷ್ಟಿಸಿದನು. ಸೋಮಸ್ಯ-ಸೋಮರಸ ಪಾನದಿಂದ, ಮದೇ-ಹರ್ಷವುಂಟಾದಾಗ, ತಾ-ಈ ಕಾರ್ಯಗಳನ್ನು ಇಂದ್ರಃ-ಇಂದ್ರನು, ಚಕಾರ ಮಾಡಿದನು.

ಸಾಯಣಭಾಷ್ಯಾಧಾರ—

ಸದ್ಮೇವ ಯಥಾ ಯಜ್ಞಗೃಹಾನ್ ಮಾನೈಃ ಷಟ್‌ತ್ರಿಂಶತ್ ಪ್ರಕ್ರಮ ಪ್ರಾಚೀತ್ಯೇವಂ ರೂಪೈಃ-ಪರಿಮಾಣೈಃ, ಪ್ರಾಕ್ ಪ್ರವಣಾನ್ ಕುರ್ವಂತಿ ತದ್ವತ್, ಸಿಂಧೂನ್ ಲೋಕಾನ್ ವಾ ಸೃಜಾನ್ ವಾ ಮಾನೈಃ ಪರಿಮಾಣೈಃ ಪ್ರಾಚಃ ಪ್ರಾಙ್ ಮುಖಾನ್ ವಿಮಿಮಾಯ ನಿರ್ಮಿತವಾನ್.

ಡ್ಡುದನ್ನು ಋಗ್ವೇದದ ೨-೧೨-೫ನೆಯ ಮಂತ್ರದಿಂದಲೇ ಕಾಣಬಹುದು. ಋಗ್ವೇದದ ೧೦-೪-೨ನೆಯ ಮಂತ್ರದಲ್ಲಿ ಇಂದ್ರನು ಮಾಡಿದನೆನ್ನುವ ಸಾಹಸ ಕಾರ್ಯಗಳೆಲ್ಲವೂ ಸುಳ್ಳೆಂದು ಹೇಳಿರುವುದು ಕೆಲವು ಕಾಲದ ಅನಂತರ ಆದ ಪ್ರಗತಿಯನ್ನು ಸೂಚಿಸುತ್ತದೆ :

> ಯದಚರಸ್ತನ್ವಾ ವಾವೃಧಾನೋ ಬಲಾನೀಂದ್ರ ಪ್ರಬ್ರುವಾಣೋ ಜನೇಷು ।
> ಮಾಯೇತ್ ಸಾ ತೇ ಯಾನಿ ಯುದ್ಧಾನ್ಯಾಹುರ್ನಾದ್ಯ ಶತ್ರುಂ ನನು ಪುರಾ
> ವಿವಿತ್ಸೇ ॥१

ದೇವಾಧಿದೇವನೆಂದು ಪ್ರಸಿದ್ಧನಾಗಿ ಅದ್ವಿತೀಯಸ್ಥಾನದಲ್ಲಿ ಮೆರೆಯು ತ್ತಿದ್ದ ದೇವೇಂದ್ರನ ಅಸ್ತಿತ್ವವೇ ಪ್ರಶ್ನಿಸಲ್ಪಟ್ಟ ಮಾತ್ರಕ್ಕೆ ವಿಶ್ವವನ್ನು ಸೃಷ್ಟಿಸಿ ಪಾಲಿಸುವವನೊಬ್ಬನು ಇಲ್ಲವೆಂದಾಗುವುದಿಲ್ಲ. ಆದರೆ ಅವನಿ ಗೊಂದು ಹೆಸರು ಬೇಕಷ್ಟೆ. ಋಗ್ವೇದದ ಋಷಿಯೊಬ್ಬನು ವಿಶ್ವದ ಸೃಷ್ಟಿಕರ್ತ ನನ್ನು "ವಿಶ್ವಕರ್ಮಾ" ಎಂಬ ಅನ್ವರ್ಥನಾಮದಿಂದ ಕರೆದನು. ನಿರುಕ್ತದಲ್ಲಿ "ವಿಶ್ವಕರ್ಮಾ ವಿಶ್ವಸ್ಯಕರ್ತಾ" ಎಂದು ಹೇಳಿದೆ. ದುರ್ಗಾಚಾರ್ಯರು ಇದನ್ನು ವಿವರಿಸುವಾಗ ಯದಿದಂ ಕಿಂಚಿದ್ ಭೂತಂ ಭವಿಷ್ಯಮಾಣಂ

---

ಅರ್ಥ—

1. ಇಂದ್ರ–ಎಲೈ ಇಂದ್ರನೇ, ತನ್ವಾ-ಸ್ತೋತ್ರದಿಂದ, ವಾವೃಧಾನಃ-ವೃದ್ಧಿ ಹೊಂದಿ, ಜನೇಷು-ಜನಗಳಲ್ಲಿ, ಬಲಾನಿ-ವೃತ್ರವಧೆಯೇ ಮೊದಲಾದ ಸಾಮರ್ಥ್ಯ ವನ್ನು, ಪ್ರಬ್ರುವಾಣಃ-ಚೆನ್ನಾಗಿ ಪ್ರಕಟಿಸುತ್ತ, ಅಚರಃ ಯತ್ ತೇ ಸಾ–ಸಂಚರಿ ಸಿದೆಯೆಂಬುದಾವುದಿದೆಯೋ ಅದು, ಮಾಯಾ ಇತ್-ಖಂಡಿತ ಸುಳ್ಳು, ಯಾನಿ ಯುದ್ಧಾನಿ ಆಹುಃ-ಯಾವ ಯುದ್ಧಗಳನ್ನು ನೀನು ಮಾಡಿದೆ ಎನ್ನುವರೋ ಅದೂ ಸುಳ್ಳು, ಅದ್ಯ-ಈಗ, ಶತ್ರುಂ–ಶತ್ರುವನ್ನು, ನವಿವಿತ್ಸೇ-ನೀನು ಹೊಂದಿಸುವುದಿಲ್ಲ, ನನುಪುರಾ–ಹಿಂದೆಯೂ ಯಾವ ಶತ್ರುಗಳೂ ಇರಲಿಲ್ಲ.

ಸಾಯಣಭಾಷ್ಯಾಧಾರ—

ಬಲಾನಿ ಪ್ರಬ್ರುವಾಣಃ–ವೃತ್ರವಧಾದಿರೂಪಾಣಿ ಸಾಮರ್ಥ್ಯಾನಿ ಪ್ರಕ ರ್ಷೇಣ ಕಥಯನ್ನಚರಃ ನನು ಇತಿ ಪ್ರಶ್ನೇ ಕಿಂಪುರಾ ಶತ್ರುಮುಲಭಥಾಃ ತಥಪಿ ನೇತ್ಯರ್ಥಃ.

ಕ್ರಿಯಾಮಾಣಂ ಚ ತಸ್ಯ ಸರ್ವಸ್ಯಕರ್ತಾ ಎಂದಿದ್ದಾರೆ. ಇಂದಿನದು, ಹಿಂದಿನದು, ಮುಂದಿನದು ಏನೇನಿದೆಯೋ ಅದೆಲ್ಲವನ್ನು ಸೃಷ್ಟಿಸುವವನು ವಿಶ್ವಕರ್ಮನು—ಎಂಬ ಅಭಿಪ್ರಾಯವು ಋಗ್ವೇದದ ೧೦ನೆಯ ಮಂಡಲದ ೮೨ನೆಯ ಸೂಕ್ತದ ಎರಡನೆಯ ಮಂತ್ರದಲ್ಲಿದೆ. "ವಿಶ್ವಕರ್ಮಾ ವಿಮನಾ ಅದ್ವಿಹಾಯಾ ಧಾತಾ ವಿಧಾತಾ ಸಂದೃಕ್" ಎಂದರೆ ವಿಶ್ವಕರ್ಮನು ವಿಶೇಷ ಪ್ರಜ್ಞೆಯುಳ್ಳವನೂ, ವೃಷ್ಟ್ಯಾದಿಗಳಿಗೆ ಕರ್ತನೂ, ಜಗನ್ನಿರ್ಮಾಣ ಕನೂ, ಶ್ರೇಷ್ಠನೂ, ಸರ್ವಜ್ಞನೂ ಎಂದರ್ಥ. ಮುಂದಿನ ಮಂತ್ರದಲ್ಲಿ "ನಃ ಪಿತಾ ಜನಿತಾ ... ವಿಧಾತಃ" ಎಂದರೆ ವಿಶ್ವಕರ್ಮನು ನಮಗೆ ಪಾಲಕನೂ, ಉತ್ಪಾದಕನೂ, ಜಗತ್ತಿಗೆ ಸೃಷ್ಟಿಕರ್ತನೂ ಎಂದು ಹೇಳಿದೆ. ಋಗ್ವೇದದ ಮತ್ತೊಬ್ಬ ಋಷಿಯು ಸೃಷ್ಟಿಕರ್ತನನ್ನು "ಪ್ರಜಾಪತಿ" ಎಂದು ಕರೆದಿದ್ದಾನೆ. ಋಗ್ವೇದದ ೧೦-೧೨೧-೧೦ ಮಂತ್ರದಲ್ಲಿ "ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾಬಭೂವ" ಎಂದು ಹೇಳಿದೆ. ಪ್ರಜಾಪತಿಯೇ ನಿನ್ನಿಂದ ಹೊರತು ಬೇರೆ ಯಾರೂ ಸೃಷ್ಟಿಸಲಾರರು ಎಂಬುದು ಇದರ ಅರ್ಥ. ನಿರುಕ್ತದಲ್ಲಿ "ಪ್ರಜಾಪತಿಃ ಪ್ರಜಾನಾಂ ಪಾತಾ ವಾ ಪಾಲಯಿತಾ" ಎಂಬ ವಿವರಣೆಯಿದೆ. ಸೃಷ್ಟಿಕರ್ತನನ್ನು "ಹಿರಣ್ಯ ಗರ್ಭ" ಎಂದು ಕರೆದಿರುವುದೂ ಉಂಟು. ಆದರೆ ಈ ಮೂರೂ ಒಬ್ಬನ ಹೆಸರು ಎಂಬುದಕ್ಕೆ ಆಧಾರವಿದೆ. "ಪ್ರಜಾಪತಿರ್ವೈ ವಿಶ್ವಕರ್ಮಾ" ಎಂದು ಶತಪಥ ಬ್ರಾಹ್ಮಣದಲ್ಲೂ "ಪ್ರಜಾಪತಿರ್ವೈ ಹಿರಣ್ಯಗರ್ಭಃ" ಎಂದು ತೈತ್ತಿರೀಯ ಸಂಹಿತೆಯಲ್ಲೂ ಹೇಳಿದೆ. ವಿಶ್ವವನ್ನು ಸೃಷ್ಟಿಸಿದವನಿಗೆ ವಿಶ್ವಕರ್ಮನೆಂಬ ಹೆಸರು ಹೆಚ್ಚು ಸೂಕ್ತವಾದುದು.

ಒಂದು ಪರ್ಣಕುಟೀರವನ್ನು ನೋಡಿದರೆ ಅದನ್ನು ಯಾರೋ ಒಬ್ಬನು ಕಾಡಿನಿಂದ ಮರವನ್ನು ಕಡಿದು ಅದರಿಂದ ಅದನ್ನು ಕಟ್ಟಿದ್ದಾನೆಂಬ ಭಾವನೆ ಬರುವುದು. ಈ ವಿಶ್ವಭವನವನ್ನು ಕಟ್ಟಿದವನು ವಿಶ್ವಕರ್ಮನೆನ್ನಬಹುದು. ಆದರೆ ಸೃಷ್ಟಿಗೆ ಮೊದಲು ಯಾವ ಸಾಮಗ್ರಿಯೂ ಇಲ್ಲದ್ದರಿಂದ ವಿಶ್ವವೆಂಬ ಭವನವನ್ನು ಯಾವ ಸಾಮಗ್ರಿಯಿಂದ ಕಟ್ಟಿದನು ಎಂಬ ಪ್ರಶ್ನೆಯು ಋಗ್ವೇದ ೧೦-೮೧-೪ನೆಯ ಮಂತ್ರದಲ್ಲಿ ಎದ್ದಿದೆ :

ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ ಕಥಾಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋತ್
ಮಹಿನಾ ವಿಶ್ವಚಕ್ಷಾಃ ॥

ಪ್ರಪಂಚದಲ್ಲಿರುವ ಪ್ರಾಣಿಗಳೆಲ್ಲವುಗಳ ಅಂಗಗಳೆಲ್ಲ ಅವನವೇ ಆಗಿರುವುದ ರಿಂದ ಪುರುಷನು ವಿಶ್ವದೊಳಗೆಲ್ಲ ಪ್ರಸರಿಸಿದ ಅಂಗಗಳುಳ್ಳವನು. ಜೇಡನ ಹೊಟ್ಟೆಯಿಂದ ಆದರ ಜಗತ್ತಾದ ಜಾಲವು ಹೊರಹೊಮ್ಮುವಂತೆ, ಮತ್ತೆ ಆ ಜಾಲವನ್ನು ಅದು ಒಳಗೆ ಎಳೆದುಕೊಳ್ಳುವಂತೆ ಪರಮಪುರುಷ ನಿಂದ ಜಗತ್ತು ಹೊರಹೊಮ್ಮಿ ಸೃಷ್ಟಿಯಾಗುವುದು ; ಮತ್ತೆ ಪರಮಪುರುಷ ನೊಳಗೆ ಲೀನವಾಗಿ ಜಗತ್ತಿನ ಪ್ರಳಯುವಾಗುವುದು. ಇಂದ್ರನಿಂದಲೋ, ವಿಶ್ವಕರ್ಮನಿಂದಲೋ, ಪ್ರಜಾಪತಿಯಿಂದಲೋ, ಹಿರಣ್ಯ ಗರ್ಭನಿಂದಲೋ ಜಗತ್ತು ಸೃಷ್ಟಿಯಾಯಿತೆಂದು ಹೇಳುವುದಕ್ಕಿಂತ ಪುರುಷಸೂಕ್ತದಲ್ಲಿನ ಸೃಷ್ಟಿ ಕಲ್ಪನೆಯು ಹೆಚ್ಚು ಸಮಂಜಸವೂ, ಶ್ರೇಷ್ಠವೂ ಆಗಿದೆ.

ಪುರುಷಸೂಕ್ತದಲ್ಲಿ ಸೇರಿರುವ ಯಜ್ಞದ ಕಲ್ಪನೆಯಿಂದ ಅದಕ್ಕೆ

ಅರ್ಥ—

1. ವಿಶ್ವಚಕ್ಷಾಃ-ಎಲ್ಲವನ್ನೂ ನೋಡಬ ನೋಡಬಲ್ಲ, ವಿಶ್ವಕರ್ಮಾ-ವಿಶ್ವ ಕರ್ಮನು, ಯತಃ-ಯಾವುದರಿಂದ, ಭೂಮಿಂ-ಭೂಮಿಯನ್ನು, ಜನಯನ್-ಸೃಷ್ಟಿಸಿದನೋ, ಮಹಿನಾ-ತನ್ನ ಮಹಿಮೆಯಿಂದ, ದ್ಯಾಂ-ದ್ಯುಲೋಕ ವನ್ನು, ವಿ ಔರ್ಣೋತ್-ಉತ್ಪನ್ನ ಮಾಡಿದನೋ ಅಂತಹ, ಅಧಿಷ್ಠಾನಂ-ಆಧಾರಸ್ಥಾನವು, ಕಿಂಸ್ವಿದಾಸೀತ್ ಯಾವುದಿದ್ದೀತು ? ಆರಂಭಣಂ-ಉಪಾದಾನ ಕಾರಣವು, ಕತಮತ್ಸ್ವಿತ್-ಯಾವುದಿದ್ದೀತು ? ಕಥಾಸೀತ್-ಯಾವ ರೀತಿಯದಿದ್ದೀತು ?

ಸಾಯಣಭಾಷ್ಯಾಧಾರ—

ಲೋಕೇಷು ಘಟಂ ಚಿಕೀರ್ಷುಃ ಕುಲಾಲೋ ಗೃಹಾದಿಕಂ ಕಿಂಚಿತ್ ಸ್ಥಾನಮಧಿಷ್ಠಾಯ ಮೃದ್ರೂಪೇಣ ಆರಂಭ ದ್ರವ್ಯೇಣ, ಚಕ್ರಾದಿರೂಪೈಃ ಉಪಕರಣೈಃ ಘಟಂ ನಿಷ್ಪಾದಯತಿ ; ತದ್ವತ್ ಈಶ್ವರಸ್ಯ ಜಗದಾಶ್ರಯ ದ್ಯಾವಾಪೃಥಿವ್ಯೋಃ ಉತ್ಪಾದನ ವೇಲಾಯಾಂ ಅಧಿಷ್ಠಾನಂ ಕಿಂ ಸ್ವಿತ್ ಆಸೀತ್ ? ಕಿಂ ನಾಮಾಭೂತ್ ? ನ ಕಿಂಚಿದಿತ್ಯರ್ಥಃ ; ಆರಂಭಣಂ-ಉಪಾದಾನ ಕಾರಣಂ.

ಅನುಕೂಲವೇನೂ ಆದಂತೆ ಕಾಣುವುದಿಲ್ಲ. ಈ ಕಲ್ಪನೆಯಿರುವ ೬, ೭, ೮, ೯, ೧೫ ಮತ್ತು ೧೬ನೆಯ ಮಂತ್ರಗಳನ್ನು ಬಿಟ್ಟು ಪುರುಷಸೂಕ್ತವನ್ನು ಓದಿದರೆ ಅದರ ಅಭಿಪ್ರಾಯವು ಸುಲಭವಾಗಿ ಗ್ರಾಹ್ಯವಾಗುವುದು. ಈ ಮಂತ್ರಗಳನ್ನು ಬಿಟ್ಟು ಉಳಿದವುಗಳನ್ನು ಅವಲೋಕಿಸಿದಾಗ, ಪುರುಷಸೂಕ್ತದ ಸುಂದರ ಕಲ್ಪನೆಯು ಹೀಗೆ ಗೋಚರವಾಗುತ್ತದೆ-ಪ್ರಪಂಚವು ಹೊರಹೊಮ್ಮಿರುವ, ಕಿಂಚಿದಂಶದಿಂದ ವಿಶ್ವವೆಲ್ಲವನ್ನೂ ವ್ಯಾಪಿಸಿ, ಬಹ್ವಂಶದಿಂದ ಅದರ ಹೊರಗಿರುವ ಪುರುಷನ ದಿವ್ಯಚಿತ್ರವು ೧ರಿಂದ ೩ನೆಯ ಮಂತ್ರಗಳಲ್ಲಿ ಚಿತ್ರಿಸಲ್ಪಟ್ಟಿದೆ. ನಾಲ್ಕನೆಯದರಲ್ಲಿ ಭೋಕ್ತೃಭೋಗ್ಯರೂಪವಾದ ಈ ಜಗತ್ತಿನ ಸೃಷ್ಟಿಯು ಪುನಃ ಪುನಃ ಆಗುವುದೆಂದು ಹೇಳಿದೆ. ಐದನೆಯ ಮಂತ್ರದಲ್ಲಿ ವಿರಾಟ್‌ಪುರುಷನು ಹೊರಹೊಮ್ಮಿ ಅವನಿಂದ ಭೂಮಿಭೌತಿಕಶರೀರಗಳಾಗುವುದನ್ನು ಹೇಳಿದೆ. ಹತ್ತನೆಯ ಮಂತ್ರದಲ್ಲಿ ಗೋವು, ಕುದುರೆ, ಅಜಾಜಾತಿ ಜಂತುಗಳು ಒಟ್ಟಿನಲ್ಲಿ ಹೇಳುವುದಾದರೆ ಎರಡು ಸಾಲು ಹಲ್ಲಿನ ಪ್ರಾಣಿಗಳು ಹುಟ್ಟುವುದನ್ನೂ, ಹನ್ನೆರಡನೆಯ ಮಂತ್ರದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಹುಟ್ಟುವುದನ್ನೂ, ಹದಿಮೂರನೆಯ ಮಂತ್ರದಲ್ಲಿ ಸೂರ್ಯ, ಚಂದ್ರ, ವಾಯು, ಇಂದ್ರಾಗ್ನಿಗಳುಹುಟ್ಟುವುದನ್ನೂ ಹದಿನಾಲ್ಕನೆಯ ಮಂತ್ರದಲ್ಲಿ ದಿಕ್ಕುಗಳೂ, ಲೋಕಗಳೂ, ಭೂಮಿ. ಅಂತರಿಕ್ಷಗಳೂ ಹುಟ್ಟುವುದನ್ನೂ ಹೇಳಿದೆ. ಇವುಗಳಲ್ಲಿ ಪುರುಷನಿಂದಾದ ಸೃಷ್ಟಿಯು ಸಂಪೂರ್ಣ ದರ್ಶನವಾಗುವುದು. ಯಜ್ಞಮಾಡುವರು ಎಂದು ಆರನೆಯ ಮಂತ್ರಗಳಲ್ಲಿ ಹೇಳಿರುವ ದೇವತೆಗಳು ಹುಟ್ಟಿರುವುದನ್ನಾಗಲೀ ಯಜ್ಞಕ್ಕೆ ಅವಶ್ಯವಾದ ಸಲಕರಣೆಗಳು ಸೃಷ್ಟಿಯಾಗಿರುವುದನ್ನಾಗಲೀ ಆ ಹಿಂದೆ ಹೇಳಿಲ್ಲ. ಯಜ್ಞವನ್ನು ಆರನೆಯ ಮಂತ್ರದಲ್ಲಿ ದೇವತೆಗಳು ಮಾಡಿದರೆಂದು ಹೇಳಿರುವುದರಿಂದ ಐದನೆಯ ಮಂತ್ರದ ಅರ್ಥದಲ್ಲಿ ಸಾಯಣಭಾಷ್ಯದ ಆಧಾರದ ಮೇಲೆ ದೇವತೆಗಳು ಹುಟ್ಟಿದರೆಂದು ಹೇಳಬೇಕಾಯಿತು. ಹದಿನಾರನೆಯ ಮಂತ್ರದಲ್ಲಿ ಹೇಳಿರುವುದನ್ನು ನೋಡಿದರೆ, ಯಜ್ಞಕಾರ್ಯವನ್ನು ಮಾಡುವಂತೆ ಜನರಿಗೆ ಪ್ರೋತ್ಸಾಹಿಸಲು ಯಜ್ಞ ವಿಷಯವನ್ನು ಸೇರಿಸಿದಂತೆ ತೋರುತ್ತದೆ. ಪುರುಷಸೂಕ್ತದ ಭವ್ಯದರ್ಶನವು ಸುಲಭವಾಗಿ

ಆಗಬೇಕಾದರೆ ಯಜ್ಞ ವಿಷಯವಾದ ಮೇಲೆ ಹೇಳಿದ ಮಂತ್ರಗಳನ್ನು ಬಿಟ್ಟು ಓದಬೇಕು.

ಜಾತಿ ತಾರತಮ್ಯವು ಪುರುಷಸೂಕ್ತದಲ್ಲಿರುವುದೆಂದು ಕೆಲವರ ಆಕ್ಷೇಪ. ಬ್ರಾಹ್ಮಣ್ಯವು ಇತರ ವೃತ್ತಿಗಳಿಗಿಂತ ಶ್ರೇಷ್ಠವೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ವೇದೋಪನಿಷತ್ತುಗಳಿಂದ ಬ್ರಹ್ಮಜ್ಞಾನವನ್ನು ಪಡೆಯು ವವರು ಬ್ರಹ್ಮನ ಉತ್ತಮಾಂಗದಿಂದ ಹುಟ್ಟಿದರೆನ್ನುವುದರಲ್ಲಿ ತಪ್ಪೇನು? ಹಾಗಲ್ಲದೆ ಬ್ರಾಹ್ಮಣ ಜಾತಿಯವರೆಲ್ಲರೂ ಶ್ರೇಷ್ಠರೆಂದಿದ್ದರೆ ಆಕ್ಷೇಪಕ್ಕೆ ಅವಕಾಶವಿತ್ತು. ಬ್ರಹ್ಮಜ್ಞಾನಿಗಳು ಬ್ರಹ್ಮನ ಉತ್ತಮಾಂಗದಿಂದ ಹುಟ್ಟಿದ ರೆಂಬುದು ಸುಂದರವಾದ ಕಲ್ಪನೆ ಆದರೆ ಶೂದ್ರರಿಗೆ ಸಮಾನವೆಂದು ಹೇಳ ಲ್ಪಟ್ಟಿರುವ ಸ್ತ್ರೀಯ ಯೋನಿಯಲ್ಲಿ ಹುಟ್ಟಿದವರೆಲ್ಲರೂ ಶ್ರೇಷ್ಠವೆಂಬ ಭಾವನೆ ಪುರುಷಸೂಕ್ತದಲ್ಲಿ ಬರುವುದಿಲ್ಲವೆಂಬುದನ್ನು ತಿಳಿದುಕೊಳ್ಳಬೇಕು.

### ಪುರುಷಸೂಕ್ತವು ವೈಷ್ಣವರಂತೆ ಶೈವರಿಗೂ ಮಾನ್ಯವು

ಶ್ರೀ ರುದ್ರವನ್ನು ಶೈವರು ನಿತ್ಯಾನುಷ್ಠಾನದಲ್ಲಿ ಉಪಯೋಗಿಸುವಂತೆ ವಿಷ್ಣುಭಕ್ತರು ಪುರುಷಸೂಕ್ತವನ್ನು ನಿತ್ಯಾನುಷ್ಠಾನದಲ್ಲಿ ಉಪಯೋಗಿಸು ತ್ತಾರೆ. ಆದರೆ ಈ ಸೂಕ್ತವು ವೈಷ್ಣವರಿಗೆ ಮೀಸಲಾದುದೆಂದೂ ಶೈವರಿಗೆ ಸೇರಿದುದಲ್ಲವೆಂದೂ ಭಾವಿಸುವುದು ತಪ್ಪಾಗುತ್ತದೆ. ಏಕೆಂದರೆ ಶೈವರು ವೈಷ್ಣವರು ಎಂಬ ಎರಡು ಪಂಗಡಗಳಾಗುವುದಕ್ಕೆ ಎಷ್ಟೋ ಮೊದಲೇ, ಈ ಸೂಕ್ತದ ಪರಮಪುರುಷನು ತನ್ನ ಕಿಂಚಿದಂಶದಿಂದ ಜಗವಾಗಿ ಆವರಿಸಿ, ಬಹ್ವಂಶದಿಂದ ತಾನೇತಾನಾಗಿ ಉಳಿದು ನಿಂದಿರುವಂತೆ ಮಂತ್ರದ್ರಷ್ಟೃವಾದ ನಾರಾಯಣಋಷಿಗೆ ಗೋಚರಿಸಿದನು. ನಾರಾಯಣಋಷಿಯಿಂದ ಪ್ರಣೀತ ವಾದುದರಿಂದ ಈ ಸೂಕ್ತಕ್ಕೆ ನಾರಾಯಣೀಯವೆಂದು ಹೆಸರು ಬಂದುದೇ ಈ ಸೂಕ್ತದ ಪರಮಪುರುಷನು ನಾರಾಯಣನೆಂದು ಪ್ರತೀತಿಯುಂಟಾಗಲು ಕಾರಣವಾಯಿತು. ಪುರುಷಸೂಕ್ತದಲ್ಲಿ ಎಲ್ಲಿಯೂ, ನಾರಾಯಣ, ಹರಿ ವಿಷ್ಣು, ಶಿವ, ಹರ ಮೊದಲಾದ ಯಾವ ಪದಗಳಾಗಲೀ ಕಂಡುಬರುವುದಿಲ್ಲ. ಪುರುಷಶಬ್ದದ ಅರ್ಥದಲ್ಲಿಯಾದರೂ ಈ ಸೂಕ್ತದಲ್ಲಿ ಉಕ್ತವಾದ ಪುರುಷನು ಯಾವುದಾದರೂ ಒಂದು ಪಂಗಡದ ದೈವವೆನ್ನಲು ಅವಕಾಶವಿರುವುದಿಲ್ಲ.

ಯಾವ ದೇಶದವರಾಗಲೀ, ಯಾವ ಕಾಲದವರಾಗಲೀ, ಯಾವ ಪಂಗಡದವರಾಗಲೀ, ಸ್ತ್ರೀಯರಾಗಲೀ, ಪುರುಷರಾಗಲೀ, ಯಾರೇ ಆಗಲೀ ಪುರುಷಸೂಕ್ತವು ತಮ್ಮದೆಂದು ಭಾವಿಸಬಹುದು.

ಋಗ್ವೇದದಲ್ಲಿ ಮೊದಲು ಮೊದಲು ಇಂದ್ರನಿಗಿದ್ದ ಸ್ಥಾನವು ವಿಷ್ಣುವಿಗಾಗಲೀ, ರುದ್ರನಿಗಾಗಲೀ ಇರಲಿಲ್ಲವೆಂಬುದು, ವೇದವಿಷಯವನ್ನು ಬರೆದಿರುವರಲ್ಲಿ ಒಮ್ಮತವಾಗಿರುವ ಅಭಿಪ್ರಾಯ. ವಿಷ್ಣುವು ಇಂದ್ರನಿಗೆ ಸಹಾಯಕನಾಗಿದ್ದನೆಂಬುದನ್ನು ಋಗ್ವೇದದ ಅನೇಕ ಮಂತ್ರಗಳು ಸಾರುತ್ತವೆ.[1] ಅಸುರರನ್ನು ಜಯಿಸುವುದರಲ್ಲಿ ವಿಷ್ಣುವು ಇಂದ್ರನಿಗೆ ಸಹಾಯಕನಾಗಿದ್ದನು. ಇಂದ್ರನ ಓಜಸ್ಸಿನಿಂದ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನಂತೆ (ಋ. ೮-೧೨ ೨೭) ರುದ್ರನು ಇಂದ್ರನಿಗೆ ಹೀಗೆ ಸಹಾಯಮಾಡಿದುದು ಋಗ್ವೇದದಲ್ಲಿ ಕಂಡುಬರುವುದಿಲ್ಲ. ಅಸುರಾರಿ ಎಂದರೆ ಇಂದ್ರನಂತೆಯೇ ವಿಷ್ಣುವೂ ಅಹುದು; ಆದರೆ ಋಗ್ವೇದದ ಒಂದು ಮಂತ್ರದ (ಋ. ೨-೧-೬) ಪ್ರಕಾರ ರುದ್ರನೇ ಸ್ವರ್ಗಲೋಕದ ಮಹಾಸುರನು. ಹೀಗೆ ಇಂದ್ರನಿಗೆ ಸಮಾನವಾದ ದೇವತೆಯೇ ಇಲ್ಲ—ಎಂಬ ಕಾಲವೊಂದಿದ್ದಿತು-(ಋ. ೪-೩೦-೧) ಆದರೆ ಈ ಗ್ರಂಥದ ಮತ್ತು "ವಚನೋಪನಿಷತ್" ಗ್ರಂಥದ ಪ್ರಾರಂಭದಲ್ಲಿ ವಿವರಿಸಿರುವಂತೆ ಇಂದ್ರನ ಅಸ್ತಿತ್ವವನ್ನು ಪ್ರಶ್ನಿಸುವ ಕಾಲ ಬಂದಿತು. ಇಂದ್ರಾದಿಗಳು ಕೊಡುವರೆಂಬ ಅಶಾಶ್ವತ ಸಂಪತ್ತಿಗೆ ಆಶೆಪಡದೆ, ಅಮರತ್ವವೆನಿಸಿದ ಮೋಕ್ಷಕ್ಕಾಗಿ ತ್ರಿಮೂರ್ತಿಗಳಿಗೂ ಕಾರಣನಾದ ತ್ರ್ಯಂಬಕ ಶಿವನನ್ನು ಋಗ್ವೇದದಲ್ಲಿ ಪ್ರಾರ್ಥಿಸಿದುದು ಕೆಳಗಿನ ಋಗ್ವೇದ ಮಂತ್ರದಲ್ಲಿ ಕಾಣಸಿಗುವುದು :

ತ್ರ್ಯಂಬಕಂ ಯಜಾ ಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

---

1. i) ಪಚಚ್ಛತಂ ಮಹಿಷಾ ಇಂದ್ರ ಪೂಷಾ ವಿಷ್ಣುಃ-(ಋ. ೬-೧೭-೧೧). ii) ಆಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ-(ಋ. ೧-೧೫೬-೫).

ಶಿವ, ನಾರಾಯಣ, ವಿಷ್ಣು ಮೊದಲಾದ ಪದಗಳೆಲ್ಲ ಪುರಾತನೋಪ ಪತ್ತುಗಳಲ್ಲಿ ಅನ್ವರ್ಥವಾಗಿ ಪರಮಾತ್ಮನೊಬ್ಬನ ವಿಷಯದಲ್ಲಿ ಉಪಯೋ ಸಲ್ಪಡುತ್ತಿದ್ದುದೂ ಉಂಟು. ಎಲ್ಲಕ್ಕೂ ದೊಡ್ಡದಾದ ಪರಬ್ರಹ್ಮ ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ ವಿಷ್ಣುವೂ ಆಹುದು; ನರರ ಹೃದ ದಲ್ಲಿ ವಾಸಿಸುವುದರಿಂದ ನಾರಾಯಣನೂ ಆಹುದು. ಮಂಗಳದಾಯಕನ ಸುಖಂಕರನೂ ಆದುದರಿಂದ ಶಿವನೂ, ಶಂಕರನೂ, ಶಂಭುವೂ ಆಹುದು ಹಿಂಸಾತ್ಮಕ ಯಜ್ಞ ಯಾಗಗಳಾಗಬಾರದೆಂಬ ಭಾವನೆಯು ಪ್ರಗತಿಪರರ ಹುಟ್ಟಿ, ಯಜ್ಞಾಚರಣೆಯನ್ನು ವಿರೋಧಿಸಿ. ಪ್ರಮಥಗಣವರ ವೀರಭದ್ರನ ಯಜ್ಞವನ್ನು ಧ್ವಂಸಮಾಡಿದಾಗ ಅವನ ಹಿಂಬಾಲಕರ ದೈವವಾದ ಶಿವನ 'ಕ್ರತುಧ್ವಂಸಿ'ಯೆಂಬ ಹೆಸರನ್ನು ಪಡೆದನು; ಯಜ್ಞಪ್ರೋತ್ಸಾಹ ಇಂದ್ರನ ಅಸ್ತಿತ್ವವು ಪ್ರಶ್ನಿಸಲ್ಪಟ್ಟ ಮೇಲೆ ಇಂದ್ರನ ಸ್ಥಾನಕ್ಕೆ ಬಂದ ಉಪೇಂದ್ರ, ಪುರಂಧರ, ವಜ್ರಬಾಹು ಮೊದಲಾದ ಇಂದ್ರನ ಸಂಬಂಧವಾ ಹೆಸರುಗಳುಳ್ಳ ವಿಷ್ಣುವಿನ ವಿಷಯದಲ್ಲಿ 'ಯಜ್ಞೋ ವೈವಿಷ್ಣುಃ' ಎನ್ನ ವಂತಾಯಿತು. ಆದರೇನು ಶೈವರಾಗಲೀ, ವೈಷ್ಣವರಾಗಲೀ ಪೂಜಿಸುವುದ ಪರಮಾತ್ಮನೊಬ್ಬನನ್ನೇ ತಾನೇ. ಆದರೆ ವೈಷ್ಣವರಂತೆ ಶೈವರೂ ಪುರುಷ ನೆಂದರೆ ವಿಷ್ಣುವೆಂದೇ ನಂಬಿರುವುದರಿಂದ ಪುರುಷನೆಂದರೆ ವಿಷ್ಣುವೆಂದು ಸಿದ್ಧ ಮಾಡುವುದು ಅನವಶ್ಯ; ಶೈವರೂ ಪುರುಷಸೂಕ್ತವನ್ನು ಮಾನ್ಯಮಾಡಲೆಂದು ಪುರುಷನೆಂದರೆ ಶಿವನೇ ಎಂದು ತೋರಿಸಲಾಗುವುದು.

ಹರಿಯ ಭಕ್ತರಿಗೆ ಹರಿ, ಹರನ ಭಕ್ತರಿಗೆ ಹರನಾಗಿ ತೋರುವ ಅಜನಾಗಿ ಸೃಷ್ಟಿಸುವ, ಹರಿಯಾಗಿ ರಕ್ಷಿಸುವ, ರುದ್ರನಾಗಿ ಲಯಗೊಳಿ ಸುವ, ಅಮೃತರೂಪ ಮೋಕ್ಷದಾಯಕ ತ್ರ್ಯಂಬಕನೆಂದು ಋಗ್ವೇದದಲ್ಲಿ ಸ್ತುತ್ಯನಾದ ಪರಬ್ರಹ್ಮವೇ ಪುರುಷಸೂಕ್ತದಲ್ಲಿ ಉಕ್ತನಾದ ಪರಮ ಪುರುಷನು. ವೇದಾಂತಿಗಳು ಪರಬ್ರಹ್ಮವೆಂದು ಕರೆವುದನ್ನೇ ವೀರಶೈವರು ಪರಶಿವಬ್ರಹ್ಮವೆನ್ನುವರು[1].

---

1. ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋಜಗನ್ಮೂಲಂ ತಂ ನಮಾಮಿ ಪರಂಶಿವಂ ॥—(ಸಿದ್ಧಾಂತಶಿಖಾಮಣಿ)

## ಪುರುಷ ಶಬ್ದದ ಅರ್ಥ

ಪುರುಷ ಶಬ್ದದ ಅರ್ಥವೇನೆಂಬುದು ವಿಚಾರಾರ್ಹವಾಗಿದೆ. ಮನುಷ್ಯರಲ್ಲಿ, ಗಂಡಸರಿಗೆ ಪುರುಷರೆಂಬುದು ಸಾಮಾನ್ಯವಾದ ಅರ್ಥ. ಸರ್ವಾಂತರ್ಯಾಮಿಯೆಂದೂ, ಸಹಸ್ರಶೀರ್ಷ ಎಂದು ಮೊದಲಾಗಿಯೂ ಹೊಗಳಲ್ಪಟ್ಟ ಪುರಷಸೂಕ್ತೋಕ್ತ ಪರಮಪುರುಷನಿಗೆ ಈ ಅರ್ಥವು ಹೊಂದುವುದಿಲ್ಲವೆಂಬುದು ಸ್ಪಷ್ಟ. 'ಪೄ' ಧಾತುವಿನಿಂದ ಆದುದು ಪುರುಷ ಶಬ್ದ; ಅದು "ಪಾಲನಪೂರಣಯೋಃ"—ಎಂದರೆ ಕಾಪಾಡುವುದು, ತುಂಬವುದು ಎಂಬ ಅರ್ಥಗಳಲ್ಲಿ ಉಪಯೋಗವಾಗುವ ಪದಗಳ ಧಾತು. ಎಲ್ಲವನ್ನೂ ತುಂಬಿ ಅದಕ್ಕೆಲ್ಲ ಸತ್ತ್ವವನ್ನು ಕೊಡುವುದು 'ಪುರುಷ' ಎಂದು ಅರ್ಥ ಮಾಡಬಹುದು. ಕಠೋಪನಿಷತ್ತಿನ (೧-೩-೧೧) ಶಾಂಕರಭಾಷ್ಯದಲ್ಲಿ "ಪುರುಷಃ ಸರ್ವಸ್ಯ ಪೂರಣಾತ್" ಎಂದು ಹೇಳಿರುವುದು ಈ ಅರ್ಥದಲ್ಲಿಯೇ. "ಪುರುಷಃ ಸರ್ವಸ್ಯ ಪಾಲನಾತ್" ಎಂದರೆ ಎಲ್ಲವನ್ನು ಕಾಪಾಡುವುದರಿಂದ 'ಪುರುಷ' ಎಂದಾಗುವುದು ಎನ್ನಬಹುದು. "ಪೂಃ" ಎಂದರೆ ದೇಹ; ಸರ್ವ ಪ್ರಾಣಿಗಳ ದೇಹದಲ್ಲಿಯೂ ಸ್ಥಿತನಾಗಿರುವನು ಪುರುಷ ಎಂದೂ ಆಗುವುದು. ಆದುದರಿಂದಲೇ ಶತಪಥ ಬ್ರಾಹ್ಮಣದಲ್ಲಿ "ಅಸ್ಯಾಂ ಪುರಿಶೇತೇ ತಸ್ಮಾತ್ ಪುರುಷಃ" ಎಂದು ಹೇಳಿದೆ. "ಪುರ ಉಷತಿ ಪ್ರಕಾಶಯತೀತಿ ಪುರುಷಃ ದಾಹಪ್ರಕಾಶಯೋರೇಕಾಧಿಕರಣತ್ವಾತ್" ಎಂದರೆ ಉಷತಿ ಶಬ್ದಕ್ಕೆ ದಹಿಸು ಎಂದರ್ಥವಾಗುವುದಲ್ಲದೆ ಪ್ರಕಾಶಪಡಿಸು ಎಂಬ ಅರ್ಥವೂ ಉಂಟು; ಆದುದರಿಂದ ವಿಶ್ವದೇಹಿಯಾದ ಪರಮಾತ್ಮನೇ ವಿಶ್ವದೇಹವನ್ನು ಪ್ರಕಾಶಪಡಿಸುವ 'ಪುರುಷ' ಶಬ್ದವಾಚ್ಯನು, ಎನ್ನಬಹುದು. 'ಉಷತಿ' ಎಂಬ ಶಬ್ದಕ್ಕಿರುವ ದಹಿಸುವುದು ಎಂಬ ಅರ್ಥವನ್ನಿಟ್ಟುಕೊಂಡು ಪುರುಷ ಶಬ್ದಕ್ಕೆ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಅರ್ಥ ಮಾಡಿದೆ: "ಯತ್ ಪೂರ್ವೋऽಸ್ಮಾತ್ ಸರ್ವಸ್ಮಾತ್ ಸರ್ವಾನ್ ಪಾಪ್ಮನ ಔಷತ್ ತಸ್ಮಾತ್ ಪುರುಷಃ" ಎಂದರೆ ಜಗತ್ಸೃಷ್ಟಿಗೆ ಪೂರ್ವದಲ್ಲಿ ಸಕಲ ಪಾಪಗಳನ್ನು ದಹಿಸಿದನಾಗಿ (ಪೂರ್ವ—ಉಷ್) 'ಪುರುಷ'ನೆಂದು ಅಭಿಪ್ರಾಯ. ಪುರುಷ ಶಬ್ದವನ್ನು ಹೇಗೆ ವಿಭಜಿಸಿ ಅರ್ಥಮಾಡಿದರೂ, ಯಾವುದೊಂದು ಸಂಗಡಕ್ಕೆ ಮೀಸಲಾದ ದೈವವೆಂದು ಅರ್ಥಮಾಡ

ಲಾಗುವುದಿಲ್ಲ ; ಎಲ್ಲ ದೈವಕ್ಕೂ ಮೀರಿದ ಪರಾತ್ಪರವೇ ಪರಮಪುರುಷ ನೆಂಬುದು ಸ್ಪಷ್ಟ.

## ಶ್ರುತಿ ಸ್ಮೃತ್ಯಾದಿಗಳಲ್ಲಿ 'ಪುರುಷ' ಶಬ್ದ ಪ್ರಯೋಗ

ಪರಬ್ರಹ್ಮವನ್ನು ವಿಷ್ಣು ನಾರಾಯಣಾದಿ ಪದಗಳಿಂದ ಕರೆವ ವೈಷ್ಣವ ರಿಗೆ ಹೇಗೋ ಹಾಗೆಯೇ ಪರಬ್ರಹ್ಮವನ್ನು ಶಿವ, ಪರಶಿವ ಪದಗಳಿಂದ ಕರೆವ ಶೈವರಿಗೂ ಪುರುಷಸೂಕ್ತವು ಮಾನ್ಯವಾದುದೆಂಬುದರಲ್ಲಿ ಸಂದೇಹವಿರ ಬಾರದು. ಪುರುಷಸೂಕ್ತವು ವೈಷ್ಣವ ಪರವಾದುದೇ, ಎಂದು ಪ್ರತೀತಿಯುಂಟಾ ಗಲು ಮೊದಲನೆಯ ಕಾರಣ—ಅದಕ್ಕೆ ನಾರಾಯಣೀಯವೆಂದು ಹೆಸರಿರು ವುದು. ನಾರಾಯಣಋಷಿಯಿಂದ ಇದು ಪ್ರಣೀತವಾದುದರಿಂದ ಇದಕ್ಕೆ ಆ ಹೆಸರು ಬಂದಿತೇ ಹೊರತು ಮತ್ತಾವ ಕಾರಣದಿಂದಲೂ ಅಲ್ಲವೆಂದೂ ನಾರಾಯಣ ಎಂಬ ಪದವೇ ಪುರುಷಸೂಕ್ತದಲ್ಲಿ ಇಲ್ಲವೆಂದೂ ಹಿಂದೆ ಹೇಳ ಲಾಯಿತು. 'ಪುರುಷ' ಎಂದರೆ ನಾರಾಯಣನೇ ಎಂದು ತಿಳಿಯಲು ಶತಪಥ ಬ್ರಾಹ್ಮಣದಲ್ಲಿರುವ ಒಂದು ಆಖ್ಯಾಯಿಕೆಯೂ ಕಾರಣವಾಗಿದೆ. ಅದರಲ್ಲಿ ಪುರುಷನೆಂಬ ನಾರಾಯಣನು, ತಾನು ಸಕಲ ಭೂತಗಳನ್ನೂ ವ್ಯಾಪಿಸಿ ಅದ್ವಿತೀಯನಾಗಬೇಕೆಂದು ಇಚ್ಛಿಸಿದನೆಂದೂ ಮತ್ತು ಪುರುಷ ಮೇಧರೂಪವಾದ ಪಾಂಚರಾತ್ರ ಯಜ್ಞವನ್ನು ತಿಳಿದುಕೊಂಡು ಅದನ್ನು ಆಚರಿಸಿದನೆಂದೂ ಹೇಳಿದೆ[1]. ಆದರೆ ಅದರಲ್ಲಿಯೇ ಪ್ರಜಾಪತಿಯು ಪುರುಷ ನಾರಾಯಣನನ್ನು ಕುರಿತು ಯಜ್ಞವನ್ನು ಆಚರಿಸುವಂತೆ ನಿರ್ದೇಶಮಾಡಿದ ನೆಂದು ಹೇಳಿದೆ[2]. ತನ್ನ ಕಿಂಚಿದಂಶದಿಂದ ಜಗತ್ತೆಲ್ಲವನ್ನೂ ಆಕ್ರಮಿಸಿ ಬಹ್ವಂಶವನ್ನು ಹಾಗೆಯೇ ಉಳಿಸಿಕೊಂಡಿರುವ ಪುರುಷಸೂಕ್ತೋಕ್ತ ಪರಮ

---

1. ಪುರುಷೋ ಹ ನಾರಾಯಣೋಽಕಾಮಯತ । ಅತಿತಿಷ್ಠೇಯಗ್ಂ ಸರ್ವಾಣಿ ಭೂತಾನ್ಯಹಮೇವೇದಗ್ಂ ಸರ್ವಗ್ಂ ಸ್ಯಾಮಿತಿ ಸ ಏತಂ ಪುರುಷ ಮೇಧಂ ಪಾಂಚರಾತ್ರಂ ಯಜ್ಞಕ್ರತುಮಪಶ್ಯತ್ ತಮಾಹರತ್ ತೇನಾಯಜತ.

2. ಪುರುಷಗ್ಂ ಹ ನಾರಾಯಣಂ ಪ್ರಜಾಪತಿರುವಾಚ ಯಜಸ್ವ ಯಜಸ್ವೇತಿ.

ಪುರುಷನು ಅದ್ವಿತೀಯನಾದ ಪರಮಾತ್ಮನಲ್ಲದೆ, ಶತಪಥಬ್ರಾಹ್ಮಣದಲ್ಲಿ ಹೇಳಿದಂತೆ ಬೇರೊಬ್ಬನಿಂದ ಹೇಳಿಸಿಕೊಂಡು ಕಾರ್ಯ ಮಾಡುವ ನಾರಾಯಣನಲ್ಲ. ಇನ್ನು ಪುರುಷನೆಂದರೆ ನಾರಾಯಣನೇ ಎಂದು ಪ್ರತೀತಿ ಬರಲು ಭಗವದ್ಗೀತೆಯಲ್ಲಿ ಉಕ್ತನಾದ ಪರಮಪುರುಷನು ನಾರಾಯಣನೇ ಎಂಬ ಭಾವನೆಯೂ ಕಾರಣವಾಗಿದೆ.

## ಭಗವದ್ಗೀತೆಯಲ್ಲಿ 'ಪುರುಷ' ಕಲ್ಪನೆ

ಶ್ರೀಮನ್ನಾರಾಯಣನ ಅವತಾರವೆನಿಸಿದ ಶ್ರೀಕೃಷ್ಣನ ಉಪದೇಶ ರೂಪವಾಗಿ ರಚಿಸಲ್ಪಟ್ಟಿರುವ ಭಗವದ್ಗೀತೆಯ 'ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ'ವೆಂಬ ಹದಿಮೂರನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ "ಸರ್ವತಃ ಪಾಣಿಪಾದಂ ತತ್ ಸರ್ವತೋಕ್ಷಿ ಶಿರೋಮುಖಂ" ಎಂದರೆ 'ಆದಿಯಿಲ್ಲದ ಪರಬ್ರಹ್ಮವು ಎಲ್ಲೆಲ್ಲಿಯೂ ಕೈಕಾಲು, ಕಣ್ಣು, ತಲೆ, ಮುಖ ಗಳುಳ್ಳದು'—ಎಂದು ಆದಿಯಿಲ್ಲದ ಪರಬ್ರಹ್ಮದ ವಿಷಯವನ್ನು ಹೇಳಿದೆ. ಆದುದರಿಂದ 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಎಂದು ಪುರುಷಸೂಕ್ತದಲ್ಲಿ ಹೊಗಳಲ್ಪಟ್ಟ ಪರಮಪುರುಷನನ್ನೇ ಭಗವದ್ಗೀತೆ ಯಲ್ಲಿ ಪರಬ್ರಹ್ಮವೆಂದು ಹೇಳಿದಂತಾಯಿತು. ಅದನ್ನೇ 'ಅನಾದಿ ಮತ್ ಪರಂ ಬ್ರಹ್ಮ ನ ಸತ್ ತನ್ನಾಸದುಚ್ಯತೇ' ಎಂದು ೧೩ನೆಯ ಅಧ್ಯಾಯದ ೧೨ನೆಯ ಶ್ಲೋಕದಲ್ಲಿಯೇ ಹೇಳಿರುವುದರಿಂದ ಈ ಪರಮಪುರುಷನೆಂದರೆ— 'ಸದಸತ್ ಕಲ್ಪನೆಗೂ ಮೀರಿದ ಪರಬ್ರಹ್ಮ'—ಎಂದಾಯಿತು. ೧೫ನೆಯ ಅಧ್ಯಾಯದ ೧೭ನೆಯ ಶ್ಲೋಕದಲ್ಲಿ ಮೂರು ಲೋಕಗಳನ್ನೂ ಧರಿಸಿ ಪ್ರವೇಶಿಸಿರುವ ಈಶ್ವರನೇ ಪರಮಾತ್ಮನಾದ ಉತ್ತಮಪುರುಷನೆಂದು ಹೇಳಿದೆ. "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಎಂದರೆ ಎಲ್ಲ ಪ್ರಾಣಿಗಳ ಹೃದಯದಲ್ಲಿಯೂ ಈಶ್ವರನಿರುವನು ಎಂದು ಕೊನೆಯ ಅಧ್ಯಾಯದ ಅಂತ್ಯದಲ್ಲಿ ಹೇಳಿ ಅದರ ಮುಂದಿನ ಮಂತ್ರದಲ್ಲಿಯೇ 'ತಮೇವ ಶರಣಂಗಚ್ಛ' ಎಂದರೆ ಆತನನ್ನೇ ಮರೆ ಹೋಗು ಎಂದು ಶ್ರೀಕೃಷ್ಣನು ಉಪದೇಶಿಸಿರುವುದರಲ್ಲಿ ತನಗಿಂತಲೂ ಅನ್ಯವಾದ ಪರಮಾತ್ಮನ ಇರುವಿಕೆಯನ್ನು ಉಪದೇಶಿಸಿದಂತಾಯಿತು. ಅದರ ಮುಂದಿನ ಶ್ಲೋಕದಲ್ಲಿ

"ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾತ್ ಗುಹ್ಯತರಂ ಮಯ್ಯ ಎಂದರೆ ಈ ರೀತಿಯಾಗಿ ಅತಿ ಗುಹ್ಯವಾದ ಜ್ಞಾನೋಪದೇಶವು ನಿ ನನ್ನಿಂದ ಹೇಳಲ್ಪಟ್ಟಿತು ಎಂದು ಹೇಳಿರುವುದರಲ್ಲಿ ಗೀತೋಪದೇಶವು ಮು ದಂತೆ ತೋರುವುದು. ಆದರೆ "ಭೂಯಃ ಶೃಣು ಮೇ ಪರಮಂ ವಚ ಎಂದರೆ ಅತ್ಯಂತ ಗೂಢವಾದ ಪರಮರಹಸ್ಯವನ್ನು ನಾನು ಹೇಳುವುದನ್ನ ಮತ್ತೆ ಕೇಳು ಎಂದು ಪ್ರಾರಂಭಿಸಿರುವುದನ್ನು ನೋಡಿದರೆ ಮುಂದೆ ಹೇಳು ವಿಷಯವು ಹೊಸದಾಗಿ ಸೇರಿಸಿದಂತೆ ತೋರುತ್ತದೆ.

ಮುಂದೆ ಹೇಳಿರುವುದಾದರೂ ಏನು? "ಮನ್ಮನಾಭವ ಮಾಮೇಕಂ ಶರಣಂ ವ್ರಜ" ಎಂದರೆ ನನ್ನಲ್ಲಿ ಚಿತ್ತನಿಡು, ನನ್ನನ್ನೋ ನನ್ನೇ ಶರಣು ಹೋಗು ಎಂದು ಈ ಮಾತನ್ನು ತಾನೇ ಈಶ್ವರನು ಎಂ ಅಭಿಪ್ರಾಯದಿಂದ ಶ್ರೀಕೃಷ್ಣನು ಹೇಳಿದ್ದಾನೆ. ಹಿಂದೆ ಎಲ್ಲರ ಹೃದಯ ದಲ್ಲಿಯೂ ಇರುವ ಈಶ್ವರನನ್ನು ನಂಬು ಎಂದು ಹೇಳಿದಾಗಲೂ ಶ್ರೀ ಕೃಷ್ಣನು ತಾನೂ ಈಶ್ವರನೂ ಒಂದೇ ಎಂಬ ಅಭಿಪ್ರಾಯದಿಂದ ಹೇಳಿದ್ದ ಮತ್ತೆ ಅದೇ ಮಾತನ್ನು 'ಭೂಯಃ ಶೃಣುಮೇ ಪರಮಂ ವಚಃ' ಎಂ ಹೊಸದೇನನ್ನೋ ಹೇಳುವಂತೆ ಉಪೋದ್ಘಾತವನ್ನು ಹಾಕಿ ಹೇಳಿರುವುದ ಹೊಸದೇನಿದೆ? ಹೀಗೆ ತನಗಿಂತಲೂ ಬೇರೆಯಾದ ಈಶ್ವರನಿರುವಂತೆಯೂ, ಮತ್ತೊಮ್ಮೆ ತಾನೇ ಈಶ್ವರನೆಂಬಂತೆಯೂ ಕೃಷ್ಣನು ಹೇಳಿರುವ ಬಗೆ ಡಾ|| ಮಾಸ್ತಿಯವರು ಹೀಗೆ ಅಭಿಪ್ರಾಯಪಡುತ್ತಾರೆ :

"ಭಾರತವು ಚಿಕ್ಕದಾಗಿದ್ದ ಕಾಲದಲ್ಲಿ ಅದರಲ್ಲಿನ ಗೀತೆಯು ಚಿಕ್ಕ ದಿದ್ದಿತು. ಆಗ ಶ್ರೀಕೃಷ್ಣನು, ಮನುಷ್ಯರಿಗೆ ಮಾದರಿಯಾದ ಮಾನವಶ್ರೇಷ್ಠ ನೆಂಬ ಕಲ್ಪನೆಯಿದ್ದಿತು; ಮತ್ತು ಆಗ 'ಈಶ್ವರನು ಎಲ್ಲರ ಹೃದಯದಲ್ಲಿಯೂ ಸ್ಥಿತನಾಗಿದ್ದಾನೆ, ಅವನನ್ನು ನಂಬು'-ಎಂದು ಹೇಳುವಂತ ಶ್ಲೋಕಗಳು ಮಾತ್ರವಿದ್ದವು. ಭಾರತಕ್ಕೂ ಅದರೊಳಗಿನ ಗೀತೆಗೂ ಅನೇಕ ಶ್ಲೋಕ ಗಳು ಸೇರಿಸಲ್ಪಟ್ಟು, ಭಾರತವು ಮಹಾಭಾರತವಾಗಿ, ಗೀತೆಯು ಭಗವದ್ಗೀತೆ ಯಾದಾಗ ಶ್ರೀಕೃಷ್ಣನು ತಾನೇ ಭಗವಂತನೆಂಬ ಕಲ್ಪನೆಯುಂಟಾಯಿತು. ಆಗ 'ನನ್ನನ್ನೇ ನಂಬು' ಎಂದು ಶ್ರೀಕೃಷ್ಣನು ತಾನೇ ಭಗವಂತನೆಂಬಂತೆ

ಹೇಳುವ ಶ್ಲೋಕಗಳು ಸೇರಿಸಲ್ಪಟ್ಟವು'—ಹೀಗಿದೆ ಡಾಕ್ಟರ್ ಮಾಸ್ತಿಯವರ ವಾದ[1].

ಮಾಸ್ತಿಯವರು ಗಮನಿಸದಿರುವ, ಆದರೆ ಅವರ ವಾದವನ್ನು ಮತ್ತಷ್ಟು ಚೆನ್ನಾಗಿ ಪುಷ್ಟೀಕರಿಸುವ ಮತ್ತೊಂದು ಶ್ಲೋಕವು ಗೀತೆಯಲ್ಲಿದೆ. ಅದು ಹದಿನೈದನೆಯ ಅಧ್ಯಾಯದ ನಾಲ್ಕನೆಯ ಶ್ಲೋಕ. ಅದರಲ್ಲಿ "ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ" ಎಂದು ಹೇಳಿದೆ. ಇದರ ಶಾಂಕರಭಾಷ್ಯದಲ್ಲಿ "ಯಸ್ಮಾತ್ ಪುರುಷಾತ್ ಸಂಸಾರ ಮಾಯಾವೃಕ್ಷಪ್ರವೃತ್ತಿಃ ಪ್ರಸೃತಾ" ಎಂದು ಹೇಳಿದೆ. ಸಂಸಾರ ಮಾಯಾವೃಕ್ಷ ಪ್ರವೃತ್ತಿಯು ಯಾವ ಪುರುಷನಿಂದ ಪ್ರಸಾರಗೊಂಡಿತೋ ಆ ಪುರುಷನನ್ನು ಶರಣು ಹೋಗುವೆನು ಎಂದು

---

1. Only the fact of growth of an earlier Bharata into the Maha-Bharata and the expansion of an earlier Gita into the present Bhagavadgita would explain the manner in which the argument of the Gita develops. Certain passages with in the Bhagavad Gita itself suggest that the Bhagavad Gita is a blend of these two views of Krishna as a noble hearted man and incaranation of divinity. Two such passages may be noted. In the eighteenth chapter of Bhagavad Gita, the argument leads Krishna to say that Isvara dwells in the heart of all living beings and moves them through the maya. 'Take refuse in Him' says Krishna This is in the Bharata vein. Soon after this Krishna says 'Abandan all dharma and take refuse in Me'. This is in the Mahabharata vein"—Quarterly Journal of the Mythic Society Cultural and Heritage Number 1956 Page 89.

ಶ್ರೀಕೃಷ್ಣನು ಹೇಳಿದಂತಾಯಿತು. ಹಿಂದೆ ಹೇಳಿದಂತೆ ಶ್ರೀಕೃಷ್ಣನು ಎ... ಹೃದಯಲ್ಲಿರುವ ಈಶ್ವರನನ್ನು ಶರಣು ಹೋಗು ಎಂದು ಉಪದೇಶಿಸಿರು... ಮಾತ್ರವಲ್ಲ; ತಾನೇ ಆ ಈಶ್ವರನನ್ನು ಮರೆಹೋಗುವೆನು ಎಂದು ಹೇ... ಉತ್ತಮ ಮಾರ್ಗದರ್ಶನವನ್ನು ಮಾಡಿದಂತಾಯಿತು. ಹೀಗೆ ತನಗಿಂತ... ಅನ್ಯವಾದ ಈಶ್ವರನನ್ನು ಶ್ರೀಕೃಷ್ಣನು ಒಪ್ಪಿರುವ ಈ ಶ್ಲೋಕವು—ಮೂ... ಗೀತೆಯಲ್ಲಿ ಇದ್ದುದೆಂದೂ, ಶ್ರೀಕೃಷ್ಣನು ತಾನೇ ಈಶ್ವರನು ಎನ್ನುವ ಶ್ಲೋ... ಗಳು ಈಚೆಗೆ ಸೇರಿಸಲ್ಪಟ್ಟವು ಎಂದೂ ಹೇಳಿ ಡಾ|| ಮಾಸ್ತಿಯವರ ವಾ... ವನ್ನು ಚೆನ್ನಾಗಿ ಸಮರ್ಥಿಸಬಹುದು.

ಗೀತೆಯೆಲ್ಲವೂ ಒಂದೇ ಕಾಲದಲ್ಲಿ ರಚಿತವಾಯಿತೆಂದು ಹೇಳು... ಸಂಪ್ರದಾಯಶರಣರು ಈ ಶ್ಲೋಕವನ್ನು ಜಗ್ಗಿಸಿ ಹೇಗಾದರೂ ಬೇರೆ ಅರ್ಥ... ಮಾಡಬೇಕಾಗುವುದು. ಶ್ರೀ ಶಂಕರಾಚಾರ್ಯರು ಮೇಲೆ ಕಂಡ ಶ್ಲೋಕ... ಕೊನೆಗೆ 'ಹೀಗೆಂದು ತಿಳಿದು' ಎಂಬರ್ಥವುಳ್ಳ ಪದಗಳನ್ನು ಅಧ್ಯಾಹಾ... ಮಾಡಿಕೊಂಡು ಅರ್ಥವನ್ನು ಸರಿಪಡಿಸಿದರು. ಶ್ರೀಶಂಕರರ ಭಾಷ್ಯವನ್ನು ಖಂಡಿಸಿ ಭಾಷ್ಯ ಬರೆದಿರುವ ಶ್ರೀರಾಮಾನುಜರಿಗೆ ಮೂಲದಲ್ಲಿ ಇಲ್ಲದ ಪ... ಗಳನ್ನು ಸೇರಿಸಿಕೊಂಡು ಅರ್ಥವನ್ನು ಸರಿಪಡಿಸುವುದು ಉಚಿತವಾದು... ಕಾಣಲಿಲ್ಲ. ಅವರು 'ಪ್ರಪದ್ಯೇ' ಎಂಬ ಶ್ಲೋಕದಲ್ಲಿರುವ ಪದವನ್ನು 'ಪ್ರಪದ್ಯೇತ್' ಎಂದು ಬದಲಾಯಿಸಿ ಅರ್ಥವನ್ನು ಹೊಂದಿಸಿದರು. ಇ... ರಿಂದ ಶ್ಲೋಕದ ಅರ್ಥವು 'ಆದಿಪುರುಷನನ್ನು ಮರೆಹೋಗುವೆನು' ಎಂಬ... ದಕ್ಕೆ ಬದಲಾಗಿ 'ಆದಿಪುರುಷನನ್ನು ಶರಣು ಹೋಗಬೇಕು' ಎಂದಾಗುವುದು. ಆದರೆ ಗೀತಾರಹಸ್ಯದಲ್ಲಿ ಲೋಕಮಾನ್ಯತಿಲಕರು ಗಮನಿಸಿರುನಂತೆ—"ಪ್ರಪದ್" ಧಾತುವು ನಿತ್ಯ ಆತ್ಮನೇಪದಿಯಾಗಿರುವುದರಿಂದ "ಪ್ರಪದ್ಯೇತ್" ಎಂಬುದಾಗಿರುವ ವಿಧ್ಯರ್ಥದ ತೃತೀಯ ಪುರುಷನ ರೂಪವು ಸಿದ್ಧವಾಗದು. ಆದುದರಿಂದ ಮೇಲ್ಕಂಡ ಶ್ಲೋಕದ ತೊಡಕನ್ನು ಹೇಗೆ ಬಿಡಿಸಿದರೂ ಸ... ಹೊಂದದೆ ಇರುವುದರಿಂದ ಶ್ರೀಕೃಷ್ಣನು, ತನಗಿಂತ ಅನ್ಯವಾದ ಪರಮೇಶ್ವರನ... ಶರಣು ಹೋಗುವೆನು—ಎಂದು ಹೇಳಿರುವನೆನ್ನುವುದೇ ಸರಿಯೆನ್ನಬೇಕಾಗು... ವುದು. ಹೀಗೆ ಶ್ರೀಕೃಷ್ಣನು 'ಈಶ್ವರನನ್ನು ಮರೆ ಹೋಗು' ಎಂದು ಅರ್ಜುನ... ನಿಗೆ ಹೇಳಿದನೆಂಬ ನಿರ್ವಿವಾದವಾದ ವಿಷಯವು, ತಾನೂ ಆ ಪರಮ...

ಪುರುಷನಿಗೆ ಶರಣು ಹೋಗುವೆನೆಂದು ಹೇಳಿ ಮಾರ್ಗದರ್ಶಕನಾದನೆಂಬು ದನ್ನು ಸಮರ್ಥಿಸುತ್ತದೆ.

ಈಗ ಶ್ರೀಕೃಷ್ಣನಿಂದ ಸ್ಮರಿಸಲ್ಪಟ್ಟ ಪರಮಪುರುಷನಾದ ಈಶ್ವರನು ಯಾರು ಎಂಬ ವಿಚಾರವನ್ನು ಕುರಿತು ವಿವೇಚಿಸಲಾಗುವುದು.

ಉಪನಿಷತ್ತುಗಳ ಸಾರವೆನಿಸಿದ ಗೀತೆಯಲ್ಲಿ ಶ್ವೇತಾಶ್ವತರಾದಿ ಉಪನಿಷ ತ್ತುಗಳ ಮಂತ್ರಗಳೂ, ಮಂತ್ರಭಾಗಗಳೂ, ಅವುಗಳಲ್ಲಿನ ಅಭಿಪ್ರಾಯಗಳೂ ಕಂಡುಬರುವುವು. ಶ್ರೀಕೃಷ್ಣನು ಸ್ಮರಿಸಿದ ಈಶ್ವರನ ದರ್ಶನವು ಶ್ವೇತಾಶ್ವತರ ಉಪನಿಷತ್ತಿನಲ್ಲಿರುವ ಈಶ್ವರನ ದರ್ಶನವನ್ನು ಹೋಲುವುದು. ಗೀತೆಯಲ್ಲಿ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಎಂದು ಶ್ರೀ ಕೃಷ್ಣನು ಹೇಳಿರುವುದಲ್ಲದೆ ಕೆಳಗೆ ಕಂಡ ಶ್ಲೋಕವನ್ನೂ ಹೇಳಿರುವನು :

ತತಃ ಪದಂ ತತ್ಪರಿಮಾರ್ಗಿತವ್ಯಂ । ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ॥
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ । ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥

ಇವುಗಳನ್ನು ಶ್ವೇತಾಶ್ವತರದ ನಾಲ್ಕನೆಯ ಅಧ್ಯಾಯದ ೧೭ ಮತ್ತು ೧೮ ನೆಯ ಮಂತ್ರಗಳಿಗೆ ಹೋಲಿಸಬಹುದು :

ಏಷದೇವೋ ವಿಶ್ವಕರ್ಮಾ ಮಹಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ಹೃದಾ ಮನೀಷಾ ಮನಸಾಭಿಕ್ಲುಪ್ತೋ ಯ ಏತದ್ವಿದುರಮೃತಾಸ್ತೇ ಭವಂತಿ ॥

ಯದಾಽತಮಸ್ತನ್ನದಿವಾ ನ ರಾತ್ರಿಃ ನ ಸನ್ನಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ॥

ಈಶ್ವರನು ಎಲ್ಲರ ಹೃದಯದಲ್ಲಿರುವನೆಂದೂ, ಜನನ ಮರಣ ಸಂಸರಣಕ್ಕೆ ಹಿಂದಿರುಗಿಸದ ಅಮರತ್ವವನ್ನು ಕೊಡುವನೆಂದೂ ಎರಡರಲ್ಲಿಯೂ ಹೇಳಿದೆ. "ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ" ಎಂದು ಗೀತೆಯಲ್ಲಿ ಹೇಳಿರುವು ದಕ್ಕೆ "ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ" ಎಂಬ ಶ್ವೇತಾಶ್ವರ ಶ್ರುತಿಯೇ ಆಧಾರ. ಸೃಷ್ಟಿಕ್ರಿಯೆಯಾಗಲು ಮಾಯೆಯಾದ ಆ

ಪರಮೇಶ್ವರನಿಂದ ಪುರಾಣಿಯೆನಿಸಿದ ಮಾಯಾಶಕ್ತಿಯ ಪ್ರಸರಣವಾಗಿ ಶಿವನು ಶಕ್ತಿವಿಶಿಷ್ಟನಾಗುವನೆಂಬುದು ಶ್ವೇತಾಶ್ವತರ ಮಂತ್ರಗಳಿಂದಲೂ ಶ್ರೀ ಕೃಷ್ಣೋಕ್ತಿಯಿಂದಲೂ ಸ್ಪಷ್ಟ. 'ಯದಕ್ಷರಂ ವೇದವಿದೋ ವದಂತಿ' ಎಂದು ಗೀತೆಯಲ್ಲಿ ಹೇಳಿರುವ ಪರತತ್ತ್ವವನ್ನು ಅಕ್ಷರವೆಂದು ಮೇಲಿನ ಶ್ವೇತಾಶ್ವತರ ಶ್ರುತಿಯಲ್ಲಿಯೂ ಹೇಳಿದೆ. "ಅನಾದಿಮತ್ ಪರಂಬ್ರಹ್ಮ ನ ಸತ್ ತನ್ನಸದುಚ್ಯತೇ" ಎಂದು ಗೀತೆಯಲ್ಲಿ ಹೇಳಿರುವುದರಿಂದ ಶ್ರೀ ಕೃಷ್ಣನು ಪ್ರಸನ್ನನಾಗಲು ಮರೆ ಹೋಗುವ ಈಶ್ವರನು "ನ ಸತ್ ನ ಚಾ ಸತ್ ಶಿವ ಏವ ಕೇವಲಃ ತದಕ್ಷರಂ" ಎಂದು ಶ್ವೇತಾಶ್ವತರದಲ್ಲಿ ಉಕ್ತ ವಾದ ಶಿವನೆ ಎಂಬುದರಲ್ಲಿ ಸಂಶಯವಿಲ್ಲ.

ಶಿವಪದ ಪ್ರಯೋಗದಿಂದ ತ್ರಿಮೂರ್ತಿಗಳಲ್ಲಿ ಒಬ್ಬನಾದ ರುದ್ರಶಿವನು ನಿರ್ದೇಶಿಸಲ್ಪಟ್ಟಿದ್ದಾನೆಂದು ಭಾವಿಸಿದರೆ ತಪ್ಪಾಗುವುದು. ಸದಸತ್ತುಗಳಿಗೆ ಮೀರಿದ "ಕೇವಲ ಶಿವ" ಎಂದು ಶ್ವೇತಾಶ್ವತರದಲ್ಲಿ ಹೇಳಿರುವುದರಲ್ಲಿ ಪರಶಿವ ಬ್ರಹ್ಮವು ನಿರ್ದೇಶಿಸಲ್ಪಟ್ಟಿದೆ; ಹೇಗೆಂದರೆ ಬ್ರಹ್ಮ ಪದವು ಪರಬ್ರಹ್ಮನಿಗೂ, ಚತುರ್ಮುಖನಾದ ಬ್ರಹ್ಮನಿಗೂ ಅನ್ವಯಿಸುವುದರಿಂದ. ಬ್ರಹ್ಮವೆಂದರೆ ಪರಬ್ರಹ್ಮನೋ, ಚತುರ್ಮುಖ ಬ್ರಹ್ಮನೋ—ಎಂಬುದನ್ನು ಸಂದರ್ಭಕ್ಕೆ ಸರಿಯಾಗಿ ಅರ್ಥಮಾಡಿಕೊಳ್ಳಬೇಕು ಹೇಗೋ ಹಾಗೆಯೇ, ಶಿವನೆಂದರೆ ತ್ರಿಮೂರ್ತಿಗಳಿಗೂ ಕಾರಣನಾದ ಪರಶಿವಬ್ರಹ್ಮವೆಂದಾದರೂ, ತ್ರಿಮೂರ್ತಿ ಗಳಲ್ಲಿ ಒಬ್ಬನಾದ ಶಿವನೆಂದಾದರೂ ಅರ್ಥ ಮಾಡಿಕೊಳ್ಳಬೇಕು. ಲಿಂಗಲೀಲಾ ವಿಲಾಸದ ಒಂದು ವಚನವನ್ನೂ ಅದರ ಟೀಕೆಯನ್ನೂ ಕೊಟ್ಟು ಈ ವಿಷಯವನ್ನು ಸ್ಪಷ್ಟಮಾಡಬಹುದು :

ದೇವಿಯರಿಬ್ಬರು ಇಲ್ಲದಂದು, ಪ್ರಧಾನಮಂತ್ರಿಗಳು ಇಲ್ಲದಂದು, ಆರು ಆರೂ ಇಲ್ಲದಂದು, ಸಂಕಲ್ಪ ವಿಕಲ್ಪವಿಲ್ಲದಂದು, ಆವ ಉತ್ಪತ್ತ್ಯಂಗಳಿಲ್ಲದಂದು ನಿನ್ನಲ್ಲಿ ನೀನಾನೆಂಬುದು ಶೂನ್ಯವಾಗಿದ್ದೆ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಟೀಕು—ಶಿವನು ಸಾಕಾರನಾಗಿ, ಗಂಗೆ ಗೌರಿವಲ್ಲಭನಾಗದಂದು ಬ್ರಹ್ಮ ವಿಷ್ಣುಗಳಿಲ್ಲದೆ, ಸಕಲ ಜೀವಜಗತ್ತುಗಳೇನೂ ಇಲ್ಲದೆ, ಸರ್ವವೂ ಶೂನ್ಯವಾಗಿ,

ಬ್ರಹ್ಮವು ತಾನೊಂದೆಯಾಗಿರ್ದು, ತನ್ನ ತಾನೆಂಬ ಭಾವ ತಲೆದೋರದೆ ನಿಶ್ಶಬ್ದವಾಗಿದ್ದಿತು ಎಂಬುದೀವಚನದ ತಾತ್ಪರ್ಯಾರ್ಥ.

ಈ ವಚನದಲ್ಲಿ ಉಕ್ತವಾಗಿರುವುದು ನಿಷ್ಕಲ ಪರಶಿವಬ್ರಹ್ಮ. ಇದೇ ಪರತತ್ತ್ವವು ಸಕಲವಾಗಿ ತ್ರಿನೇತ್ರನೂ, ತ್ರಿಶೂಲಧಾರಿಯೂ, ಸರ್ಪಭೂಷಣನೂ, ಗೌರೀವಲ್ಲಭನೂ ಆದ ವ್ಯಕ್ತಸ್ವರೂಪವನ್ನು ತಾಳುವುದು; ಅಲ್ಲದೆ, ಅದು ವ್ಯಕ್ತಸ್ವರೂಪರಾದ ಜಗತ್ತನ್ನು ಸೃಷ್ಟಿಸುವ ಬ್ರಹ್ಮನೂ, ಅದನ್ನು ಧರಿಸಿ ಪೊರೆವ ವಿಷ್ಣುವೂ ಆಗುವುದು. ತ್ರಿಮೂರ್ತಿಗಳಲ್ಲಿ ಯಾರದಾದಾಗಲಿ, ಅವರ ವ್ಯಕ್ತಸ್ವರೂಪವು ಭಕ್ತಿಗಮ್ಯವಾದುದು. ಇವುಗಳಿಗೆ ಮೂಲವಾದ ಅಕ್ಷರಬ್ರಹ್ಮದ ಅವ್ಯಕ್ತಸ್ವರೂಪವು ಜ್ಞಾನಗಮ್ಯವಾದುದು ಅವ್ಯಕ್ತೋಪಾಸನೆಯೆನಿಸಿದ ಜ್ಞಾನಯೋಗವೂ, ವ್ಯಕ್ತೋಪಾಸನೆಯೆನಿಸಿದ ಭಕ್ತಿಯೋಗವೂ ಗೀತೆಯಲ್ಲಿ ಉಕ್ತವಾಗಿವೆ. ಜ್ಞಾನಯೋಗಕ್ಕಿಂತ ಭಕ್ತಿಯೋಗವು ಸುಲಭವೆಂದು ಗೀತೆಯ ಅಭಿಪ್ರಾಯ.

ಭಗದ್ಗೀತೆಯ ಹನ್ನೆರಡನೆಯ ಅಧ್ಯಾಯದ ಪ್ರಾರಂಭದಲ್ಲಿಯೇ ಅರ್ಜುನನು ಶ್ರೀಕೃಷ್ಣನನ್ನು ಕುರಿತು "ನಿನ್ನ ಉಪಾಸನೆಯನ್ನು ಮಾಡುವಂತಹ ಭಕ್ತರಲ್ಲಿಯೂ ಅವ್ಯಕ್ತವಾದ ಅಕ್ಷರಬ್ರಹ್ಮದ ಉಪಾಸನೆಯನ್ನು ಮಾಡುವ ಭಕ್ತರಲ್ಲಿಯೂ ಉತ್ತಮರಾದ ಯೋಗವೇತೃಗಳು ಯಾರು? ಎಂದು ಪ್ರಶ್ನಿಸುವನು[1] ಶ್ರೀಕೃಷ್ಣನು ತನ್ನನ್ನು ಭಕ್ತಿಯಿಂದ ಉಪಾಸನೆಯನ್ನು ಮಾಡುವವರೇ ಮೇಲು ಎಂದು ಹೇಳಿ, ಅವ್ಯಕ್ತದಲ್ಲಿ ಆಸಕ್ತವಾದ ಚೇತಸ್ಸು ಉಳ್ಳವರಿಗೆ ಹೆಚ್ಚಿಗೆ ಕ್ಲೇಶವಾಗುವುದೆಂದೂ, ದೇಹಧಾರಿಗಳಿಗೆ ಅವ್ಯಕ್ತದ ಉಪಾಸನೆಯು ಕಷ್ಟಸಾಧ್ಯವೆಂದೂ ಹೇಳುವನು[2]. ಈ ಪ್ರಶ್ನೋ

---

1. ಏವಂ ಸತತ ಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
   ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧೨-೧ ॥
2. ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ ।
   ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೧೨-೫ ॥
3. ಭ. ಗೀ. ೧೮-೬೧ ಮತ್ತು ೬೨.
4. ಭ. ಗೀ. ೧೫-೫.

ತ್ತರಗಳಿಂದಲೇ ವ್ಯಕ್ತೋಪಾಸನೆಗೆ ಗುರಿಯು ಪರಮವ್ಯಕ್ತಿಯಾದ ಶ್ರೀ ಕೃಷ್ಣನೆಂಬುದೂ, ಜ್ಞಾನೋಪಾಸನೆಗೆ ಗುರಿಯು ಅಕ್ಷರಬ್ರಹ್ಮವೆಂಬುದೂ ಸ್ಪಷ್ಟನಾಗುತ್ತದೆ. ಆದುದರಿಂದ ಪರಸ್ಪರ ವಿರುದ್ಧವಾಗಿ ತೋರುವ ಹಿಂದೆ ಹೇಳಿದ ಎರಡು ನಿಲುವುಗಳು ಒಂದಕ್ಕೊಂದು ವಿರೋಧವಿಲ್ಲದೆ ಅರ್ಥವಾಗುತ್ತವೆ. ಇನ್ನು ಅಕ್ಷರಬ್ರಹ್ಮವನ್ನು ಉಪಾಸನೆಮಾಡು ಎಂದು ಶ್ರೀಕೃಷ್ಣನು ಉಪದೇಶಮಾಡಿದಾಗ ಅಥವಾ ಅಕ್ಷರಬ್ರಹ್ಮವನ್ನು ತಾನೇ ಉಪಾಸನೆ ಮಾಡುತ್ತೇನೆಂದು ಹೇಳಿದಾಗ, ಅಕ್ಷರಬ್ರಹ್ಮವೆಂದರೆ ಪರಶಿವಬ್ರಹ್ಮವೆಂಬುದು ಸ್ಪಷ್ಟ; ಏಕೆಂದರೆ ಎಲ್ಲಿಯೂ ಶ್ರೀಕೃಷ್ಣನು ನಾರಾಯಣನ ಉಪಾಸನೆಯನ್ನು ಮಾಡುವ ವಿಚಾರವು ಉಕ್ತವಾಗಿಲ್ಲ; ಆದರೆ ಭಗವದ್ಗೀತೆಯು ಯಾವುದರ ಭಾಗವೋ ಆ ಮಹಾಭಾರತದಲ್ಲೇ ಶ್ರೀಕೃಷ್ಣನು ಉಪಮನ್ಯುವಿನಿಂದ ಉಪದೇಶವನ್ನು ಪಡೆದು ಪರಶಿವನನ್ನು ಪ್ರಾರ್ಥಿಸಿದುದಾಗಿ ಉಕ್ತವಾಗಿದೆ. ಆದುದರಿಂದ ಗೀತೆಯಲ್ಲಿ ಪರಮಪುರುಷನೆಂದರೆ ಪರಶಿವಬ್ರಹ್ಮವೆಂಬುದು ಸ್ಪಷ್ಟ. ಶ್ರೀಕೃಷ್ಣನು ಪರಶಿವಬ್ರಹ್ಮವನ್ನು ಕುರಿತು ತಪಸ್ಸು ಮಾಡಿ ಅದರಲ್ಲಿ ತಾದಾತ್ಮ್ಯವನ್ನು ಹೊಂದಿರುವುದರಿಂದ ಕೆಲವು ವೇಳೆ ತಾನೇ ಅದೆಂಬಂತೆ ಹೇಳಿರುವುದರಲ್ಲಿ ಆಶ್ಚರ್ಯವಿಲ್ಲ; ಆದರೆ ಆತನು ಲೋಕ ಹಿತಕ್ಕಾಗಿ ವ್ಯಕ್ತರೂಪವಾಗಿ ಅವತರಿಸಿರುವುದರಿಂದ ತಾನು ಬೇರೆಯೆಂಬಂತೆ ಹೇಳಿರುವುದೂ ಉಂಟು. ಧ್ಯಾನ, ಪೂಜೆಗಳಿಗೆ ವ್ಯಕ್ತರೂಪದ ಅವಶ್ಯಕತೆಯಿದೆ. ಆದುದರಿಂಧ ಜ್ಞಾನಗಮ್ಯವಾದ ನಿರಾಕಾರವೂ, ನಿಷ್ಕಲವೂ ಆದ ಪರಶಿವಬ್ರಹ್ಮವೇ ಸಕಲವೂ, ಸಾಕಾರವೂ ಆಗಿ ತ್ರಿಮೂರ್ತಿಗಳ ರೂಪದಿಂದ ಭಕ್ತಿಗಮ್ಯವಾಗುವುದು ಮತ್ತು ಸೃಷ್ಟಿ-ಸ್ಥಿತಿ-ಲಯ ಕಾರ್ಯಗಳನ್ನೂ ಮಾಡುವುದು. ಆದುದರಿಂದಲೇ ಅವಿಭಕ್ತವಾಗಿ ಜ್ಞಾನಗಮ್ಯವಾಗಿರುವುದೇ ವಿಭಕ್ತವಾಗಿ ತ್ರಿಮೂರ್ತಿಗಳಾಗಿ ಭಕ್ತಿಗಮ್ಯವಾಗುವುದು :

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।
ಭೂತ ಭರ್ತೃ ಚ ತಜ್‌ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥1

---

ಅರ್ಥ—

1. ತತ್–ಅದು, ಅವಿಭಕ್ತಂ–ಅವಿಭಕ್ತವಾದುದನ್ನಾಗಿಯೂ, ಚ-ಮತ್ತು

ಎಂದು ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ಹೇಳಿರುವುದರ ಅಭಿಪ್ರಾಯವಾದರೂ ಇದೇ. ಇದನ್ನೇ ಶ್ರೀ ನಿಜಗುಣಶಿವಯೋಗಿಗಳು ಮತ್ತೊಂದು ರೀತಿಯಲ್ಲಿ ಹೇಳಿರುವರು :

ಸಾಕ್ಷಾನ್ನಿರ್ಲಕ್ಷಣವಾಗಿಹ ನೀನು । ಈಕ್ಷಿಸೆ ನಿರ್ಗುಣವಾಗಿಹ ನೀನು-ಅಜಿಯಿಂ ನಾನಾ ಗುಣಮಯನೆನಿಸಿ। ನಿಜದಿಂ ಬಹು ಲಕ್ಷಣಯುತನೆನಿಸಿ। ಬ್ರಹ್ಮನೆನಿಸಿ ಲೋಕವ ಸೃಜಿಸುತ್ತ। ಬ್ರಹ್ಮಾಧ್ಯಯನಾದಿಯನರುಹುತ್ತ। ವಿಷ್ಣುವೆನಿಸಿ ಜಗಮಂ ಪಾಲಿಸುತ । ವೈಷ್ಣವ ಜನರಂ ಪಾಲಿಸುತ । ರುದ್ರನೆನಿಸಿ ಯೊಲಗಿಸಿಕೊಳ್ಳುತ್ತ । ಕ್ಷುದ್ರದಪಘವಸುರೆ ಸಂಹರಿಸುತ್ತ.

ಇರುವುದೆಂದು ನಿಜಗುಣರು ಹೇಳಿರುವ ಪರಶಿವಬ್ರಹ್ಮವೇ ಗೀತೆಯಲ್ಲಿ ಉಕ್ತವಾಗಿರುವ ಪರಮಪುರುಷನೆಂದು ನಿರ್ಧರಿಸಬಹುದು.

## ಈಶೋಪನಿಷತ್ತಿನಲ್ಲಿ 'ಪುರುಷ'ನ ಕಲ್ಪನೆ

ದಶೋಪನಿಷತ್ತುಗಳಲ್ಲಿ ಮೊದಲನೆಯದಾಗಿ ಎಣಿಸಲ್ಪಟ್ಟಿರುವ ಈಶಾವಾಸ್ಯೋಪನಿಷತ್ತಿನಲ್ಲಿ ಇರುವ ಮಹಾ ವಾಕ್ಯವೊಂದರಲ್ಲಿ ಪರಮಪುರುಷನ ಕಲ್ಪನೆಯಿದೆ. ಛಾಂದೋಗ್ಯೋಪನಿಷತ್ತಿನಲ್ಲಿ "ತತ್ತ್ವಮಸಿ" ಎಂದರೆ ಆ ಪರಮ (ಪುರುಷ) ತತ್ತ್ವವೇ ನೀನು ಎಂದು ಗುರುವು ಹೇಳಿರುವಂತೆ ಈಶಾವಾಸ್ಯದ ಮಂತ್ರವೊಂದರಲ್ಲಿ "ಪುರುಷಃ ಸೋಽಹಮಸ್ಮಿ" ಎಂದರೆ ಆ ಪರಮಪುರುಷನವನೇ ನಾನು ಎಂದು ಜೀವನ್ಮುಕ್ತನಾದ ಋಷಿಯು ಹೇಳಿರುವ ವಾಕ್ಯವಿದೆ ಆ ಮಂತ್ರವಿದು :

---

ಭೂತೇಷು-ಭೂತಗಳಲ್ಲಿ, ವಿಭಕ್ತಮಿವಸ್ಥಿತಂ-ವಿಭಾಗಿಸಲ್ಪಟ್ಟಂತೆ ಇರುವುದಾಗಿಯೂ, ಭೂತಭರ್ತೃ ಚ-ಪ್ರಾಣಿಗಳನ್ನು ಧಾರಣೆ ಪೋಷಣೆ ಮಾಡುವ ವಿಷ್ಣುರೂಪವುಳ್ಳುದ್ದಾಗಿಯೂ, ಚ-ಮತ್ತು, ಗ್ರಸಿಷ್ಣು-ಸಂಹರಿಸುವ ರುದ್ರರೂಪವುಳ್ಳದ್ದಾಗಿಯೂ, ಚ-ಮತ್ತು, ಪ್ರಭವಿಷ್ಣು-ಸೃಷ್ಟಿಸುವ ಬ್ರಹ್ಮರೂಪವುಳ್ಳದ್ದನ್ನಾಗಿಯೂ, ಜ್ಞೇಯ-ತಿಳಿಯತಕ್ಕದ್ದು.

ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹರಶ್ಮೀನ್ ಸಮೂಹ ತೇಜಃ।
ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋ ಸಾವಸೌ
ಪುರುಷಃ ಸೋಽಹಮಸ್ಮಿ ॥

ಇದರ ಸರಳ ಪದ್ಯಾನುವಾದವಿದು :

ಯಮ ಪ್ರಾಜಾಪತ್ಯ ಪೂಷ ಸೂರ್ಯೈಕರ್ಷಿ ।
ಅಮಿತ ರಶ್ಮಿಯಂ ಸರಿಸಿಯುಪಸಂಹರಿಸು ತೇ ।
ಜಮಂ, ತವ ಕಲ್ಯಾಣತಮರೂಪಮಂ ನೋೞ್ಪೆ ।
ನಮಲಮದು, ಪುರುಷನಾವನೋ ಆನವಂ ॥

ಈ ಮಂತ್ರದಲ್ಲಿ ಉಕ್ತನಾದ ಪುರುಷನೆಂದರೆ ಅಗ್ನಿ, ಯಮ, ಮಾತರಿಶ್ವ ಮೊದಲಾದ ಹೆಸರುಗಳಿಂದ ಕರೆಯಲ್ಪಡುವ ಅದ್ವಿತೀಯವಾದ ಪರಬ್ರಹ್ಮವೇ[1]. ಆ ಪರಮಪುರುಷನಾರೆಂಬುದನ್ನು ಈಶಾವಾಸ್ಯೋಪನಿಷತ್ತಿನ ಪ್ರಾರಂಭದಲ್ಲಿಯೇ ತಿಳಿಸಿದೆ "ಈಶಾವಾಸ್ಯಮಿದಗ್ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್" ಎಂದರೆ ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ವ್ಯಾಪಿಸಿರುವ ಆ ಪರಮಪುರುಷನೇ ಈಶನು. ಈಶ, ಈಶಾನ, ಈಶ್ವರ ಮೊದಲಾದ ಶಬ್ದಗಳು ಪರಶಿವನ ಹೆಸರುಗಳೆಂಬುದನ್ನು ಕೋಶವು ಹೇಳುತ್ತದೆ :

ಶಂಭುರೀಶಃ ಪಶುಪತಿಶ್ಶಿವಶ್ಶೂಲೀ ಮಹೇಶ್ವರಃ ।
ಈಶ್ವರಶ್ಶರ್ವ ಈಶಾನಶ್ಶಂಕರಶ್ಚಂದ್ರಶೇಖರಃ ॥

ಪುರುಷಸೂಕ್ತದ ಎರಡನೆಯ ಮಂತ್ರದಲ್ಲಿಯೇ ಈಶಾನ ಪದವಿರುವುದರಿಂದ ಈ ವಿಷಯದಲ್ಲಿ ಸಂದೇಹಕ್ಕೆ ಕಾರಣವಿಲ್ಲ.

## ಕೇನೋಪನಿಷತ್ತಿನಲ್ಲಿ "ಪುರುಷ" ಕಲ್ಪನೆ

ಕೇನೋಪನಿಷತ್ತಿನಲ್ಲಿ, ಇಂದ್ರನ ಮುಂದೆ ಯಕ್ಷರೂಪದಲ್ಲಿ ಪರ

---

1. ಏಕಂ ಸದ್ ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ.

ಬ್ರಹ್ಮವು ಕಾಣಿಸಿಕೊಂಡುದಾಗಿ ಹೇಳಿದೆ ಪರಶಿವಬ್ರಹ್ಮದ ಶಕ್ತಿರೂಪ ಉಮಾದೇವಿಯೇ, ಇಂದ್ರನಿಗೆ ಕಾಣಿಸಿಕೊಂಡದು ಪರಬ್ರಹ್ಮ-ಎಂದು ತಿಳಿಸಿದಂತೆ ಆ ಉಪನಿಷತ್ತಿನಲ್ಲಿ ಹೇಳಿದೆ. ಇದರ ಶಾಂಕರಭಾಷ್ಯದಲ್ಲಿ ಉಮಾಹೈಮವತಿಯು ಹಾಗೆ ಕಾಣಿಸಿಕೊಂಡ ಈಶ್ವರನ ಸಮೀಪವರ್ತಿನಿಯಾದುದರಿಂದ ಆತನ ಸ್ವರೂಪವನ್ನು ಆಕೆ ಬಲ್ಲಳೆಂದು ತಿಳಿದು, ಇಂದ್ರನು ಅವಳನ್ನು ಸಮೀಪಿಸಿದನು ಎಂದು ಹೇಳಿದೆ[1]. ಪರಶಿವಬ್ರಹ್ಮವೇ ಯಕ್ಷರೂಪದಿಂದ ಕಾಣಿಸಿಕೊಂಡಿತೆಂಬುದು ಸ್ಪಷ್ಟ.

## ಕಠೋಪನಿಷತ್ತಿನಲ್ಲಿ "ಪುರುಷ" ಕಲ್ಪನೆ

ಕಠೋಪನಿಷತ್ತಿನ ಕಲ್ಪನೆಯಲ್ಲಿ "ಪುರುಷ" ಎಂದರೆ ಅದ್ವಿತೀಯವಾದ ಪರಬ್ರಹ್ಮವೇ. ಅದರ ಪ್ರಕಾರ "ಪುರುಷಾತ್ ನ ಪರಂ ಕಿಂಚಿತ್" ಪುರುಷನಿಗಿಂತಲೂ ಶ್ರೇಷ್ಠವಾದುದೇನೂ ಇಲ್ಲ. "ಸಾಕಾಷ್ಠಾ" ಎಂದರೆ ಅವನೇ ಪರಾಕಾಷ್ಠವು. "ಸಾಪರಾಗತಿಃ" ಎಂದರೆ ಅವನೇ ಮೋಕ್ಷಸ್ಥಾನವು. "ಮಹತಾತ್ ಪರಮವ್ಯಕ್ತಂ, ಅವ್ಯಕ್ತಾತ್ ಪುರುಷಃ ಪರಃ" ಎಂದರೆ ಮಹತ್ತಿಗಿಂತಲೂ ಅವ್ಯಕ್ತವು ಹೆಚ್ಚಿನದು, ಅವ್ಯಕ್ತಕ್ಕಿಂತಲೂ ಪುರುಷನು ಹೆಚ್ಚು—ಎಂದು ಈ ಮಂತ್ರವು ಪ್ರಾರಂಭವಾಗುತ್ತದೆ. ಈ ಮಂತ್ರದ ಶಂಕರಭಾಷ್ಯದಂತೆ "ಪುರುಷಃ ಸರ್ವ ಪೂರಣಾತ್" ಎಂದರೆ ಎಲ್ಲವನ್ನು ತುಂಬುವುದರಿಂದ ಪುರುಷನೆಂಬ ಹೆಸರು ಬಂದಿದೆ. "ಈಶಾವಾಸ್ಯಮಿದಂ ಸರ್ವಂ" ಎಂಬ ಆಧಾರದಂತೆ ಪುರುಷನೆಂದರೆ ಈಶನೇ. ಇನ್ನು ಶಾಂಕರಭಾಷ್ಯದಂತೆ "ಅವ್ಯಕ್ತಂ ಸರ್ವಸ್ಯ ಜಗತೋ ಬೀಜಭೂತಂ.... ಸರ್ವಕಾರ್ಯ ಕಾರಣಶಕ್ತಿಸಮಾಹಾರರೂಪಂ.... ಪರಮಾತ್ಮನ್ಯೋತಪ್ರೋತಭಾವೇನ ಸಮಾಶ್ರಿತಂ ವಟಕಣಿಕಾಯಾಮಿವ ವಟವೃಕ್ಷ ಶಕ್ತಿಃ" ಆಲದ ಬೀಜದಲ್ಲಿ ಆಲದಮರದ ಶಕ್ತಿಯು ಅಡಗಿರುವಂತೆ ಪರಮಾತ್ಮನಲ್ಲಿ ಹಾಸುಹೊಕ್ಕಾಗಿ ಆಶ್ರಯಿಸಿಕೊಂಡಿರುವ ಜಗತ್ತಿಗೆ ಬೀಜ

---

1. ಉಮೈವ ಹಿಮವತೋ ದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನ ಈಶ್ವರೇಣ ಸಹವರ್ತತ ಇತಿ ಜ್ಞಾತುಂ ಸಮರ್ಥಾ ಇತಿ ಕೃತ್ವಾ ತಾಂ ಉಪಜಗಾಮ.

ಭೂತವಾಗಿರುವ ಸರ್ವಕಾರ್ಯಕಾರಣಶಕ್ತಿರೂಪವಾದುದು ಅವ್ಯಕ್ತವು ಎಂದರ್ಥ. ಅವ್ಯಕ್ತವೆಂದರೆ ಪರಶಿವಶಕ್ತಿರೂಪವಾದ ಮತ್ತು ಜಗತ್ತಿಗೆ ಕಾರಣ ವಾದ ಪ್ರಕೃತಿ ಎಂದರೆ ಮಾಯೆಯು. ಆ ಮಾಯೆಗಿಂತ ಮಾಯಿಯಾದ ಪರಮೇಶ್ವರನೇ ಶ್ರೇಷ್ಠವೆಂದಾಯಿತು. ಇದು "ಮಾಯಾಂತು"[1] ಎಂದು ಪ್ರಾರಂಭವಾಗುವ ಶ್ವೇತಾಶ್ವತರ ಶ್ರುತಿಯನ್ನು ಜ್ಞಾಪಿಸುತ್ತದೆ. ಅಂಗುಷ್ಠ ಪರಿಮಾಣದ ಆತ್ಮನು ಹೃದಯದಲ್ಲಿ ಇರುವನು ; ಅವನು ಹೊಗೆಯಿಲ್ಲದ ಜ್ಯೋತಿಯಂತಿರುವನು ; ಹಿಂದಿನದಕ್ಕೂ ಅವನೇ ಈಶಾನನು ; ಇಂದಿನ ವನೂ, ನಾಳೆಯವನೂ ಆತನೇ ಎಂದರೆ ಅವನು ಶಾಶ್ವತನು—ಎಂದು ಕಠೋಪನಿಷತ್ತಿನ ಎರಡನೆಯ ಅಧ್ಯಾಯದ ೧ನೆಯ ವಲ್ಲಿಯಲ್ಲಿ ಹೇಳಿದೆ[2]. ಇದರ ಎರಡನೆಯ ವಲ್ಲಿಯಲ್ಲಿ ಪುರುಷನೇ ಬ್ರಹ್ಮವು, ಆವನು ಶುಭ್ರನು, ಅವನೇ ಅಮೃತ ಎಂದು ಹೇಳಿದೆ ಮತ್ತೆ ಕಠೋಪನಿಷತ್ತಿನ ಕೊನೆ ಯಲ್ಲಿಯೂ, ಪುರುಷನ ವಿಷಯದಲ್ಲಿ ಇದೇ ಮಾತುಗಳನ್ನು ಮತ್ತೆ ಹೇಳಿದೆ[3]. ಪುರುಷಸೂಕ್ತದಲ್ಲಿ 'ಅಮೃತಸ್ಯ ಈಶಾನಃ' ಎಂದು ಪುರುಷನನ್ನು ಕುರಿತು ಹೇಳುವುದನ್ನು ಕಠವು 'ತದೇವ ಶುಕ್ರಂ ತದ್‌ಬ್ರಹ್ಮ ತದೇವಾಮೃತ ಮುಚ್ಯತೇ' ಎಂದು ಹೇಳಿ ಸಮರ್ಥಿಸುತ್ತದೆ. ಇದರಿಂದ ಪುರುಷನೇ ಪರಬ್ರಹ್ಮವೆಂಬುದು ವ್ಯಕ್ತವಾಗುವುದು. "ತ್ರ್ಯಂಬಕಂ ಯಜಾಮಹೇ" ಎಂಬ ಮಂತ್ರದಲ್ಲಿರುವ "ಮಾಮೃತಾತ್" ಎಂಬ ಪದಗಳು ಪುರುಷನೆಂದರೆ ಅಮೃತಪ್ರದನೂ ತ್ರಿಮೂರ್ತಿಗಳಿಗೆ ಕಾರಣನೂ ಆದ ಋಗ್ವೇದೋಕ್ತ ತ್ರ್ಯಂಬ ಕನೇ ಎಂಬುದನ್ನು ಸ್ಪಷ್ಟಗೊಳಿಸುತ್ತವೆ.

---

1. ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಂ ।
ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್॥

2. ಅಂಗುಷ್ಠ ಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ಕಠ. ೨-೧-೧೨ ॥

3. ಅಂಗುಷ್ಠ ಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।
ಈಶಾನೋ ಭೂತ ಭವ್ಯಸ್ಯ ಸ ಏವಾದ್ಯ, ಸ ಉಶ್ವಃ ॥ ಕಠ. ೨-೧-೧೩ ॥

## ಪ್ರಶ್ನೋಪನಿಷತ್ತಿನಲ್ಲಿ 'ಪುರುಷ' ಕಲ್ಪನೆ

ಪ್ರಶ್ನೋಪನಿಷತ್ತಿನಲ್ಲಿ ಆರನೆಯ ಪ್ರಶ್ನೆಯು "ಕ್ವಾಸೌಪುರುಷಃ" ಎಂದರೆ 'ಆ ಪುರುಷನು ಎಲ್ಲಿರುವನು?' ಎಂಬುದೇ ಆಗಿದೆ. 'ಇಹೈವಾಂತಃ ಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವಂತಿ' ಎಂಬುದು ಇದಕ್ಕೆ ಉತ್ತರ. ಯಾವನಲ್ಲಿ (ಪ್ರಾಣಾದಿ) ಹದಿನಾರು ಕಲೆಗಳು ಹೊರಹೊಮ್ಮುವುವೋ ಆ ಪುರುಷನು ಇಲ್ಲಿಯೇ ಶರೀರದೊಳಗೆ ಇರುತ್ತಾನೆ ಎಂಬುದು ಮೇಲ್ಕಂಡ ಉತ್ತರದ ಅರ್ಥ. ಸಮುದ್ರದೊಳಕ್ಕೆ ನದಿಗಳೆಲ್ಲವು ಹರಿದು ಅವುಗಳ ನಾಮರೂಪಗಳನ್ನು ಕಳೆದುಕೊಂಡು ಸಮುದ್ರವೇ ಆಗುವಂತೆ, ಪ್ರಾಣಾದಿಕಲೆಗಳು ಪುರುಷನಲ್ಲಿ ಅಡಗಿಹೋಗಲು, ಪುರುಷನೇ ಉಳಿಯುತ್ತಾನೆಂದು ಹೇಳಿದೆ; ಗಾಲಿಯಗುಂಭದಲ್ಲಿನ ಹಾರೆಯ ಕೋಲುಗಳಂತೆ ಯಾವನಲ್ಲಿ ಕಲೆಗಳು ಪ್ರತಿಷ್ಠಿತವಾಗಿರುವುವೋ ಆ ಪುರುಷನನ್ನು ಅರಿತುಕೊಂಡು ಮರಣದ ವ್ಯಥೆಯಿಂದ ತಪ್ಪಿಸಿಕೊಳ್ಳಬೇಕೆಂಬುದು ಪ್ರಶ್ನೋಪನಿಷತ್ತಿನ ಉಪದೇಶ[1]. "ನಾತಃ ಪರಮಸ್ತಿ" ಎಂದರೆ ಪುರುಷನೆಂಬ ಪರಬ್ರಹ್ಮಕ್ಕಿಂತಲು ಶ್ರೇಷ್ಠವಾದುದಿಲ್ಲವೆಂಬುದು ಪ್ರಶ್ನೋಪನಿಷತ್ತಿನ ಕೊನೆಯ ಮಾತು. ಐದನೆಯ ಪ್ರಶ್ನೆಯ ಶಾಂಕರಭಾಷ್ಯದ ಅಂತ್ಯದಲ್ಲಿ ಹೇಳಿದಂತೆ ಪುರುಷ—ಎಂದರೆ ಸತ್ಯವೂ ಅಕ್ಷರವೂ ಆದ ಪರಬ್ರಹ್ಮವೆ.

## ಮುಂಡಕೋಪನಿಷತ್ತಿನಲ್ಲಿ 'ಪುರುಷ' ಕಲ್ಪನೆ

ಪ್ರಶಾಂತಚಿತ್ತದಿಂದ ತಪಸ್ಸನ್ನು ಮಾಡುವ ವಿದ್ವಾಂಸರು ಸೇರುವ ಪರಾತ್ಪರತತ್ತ್ವವನ್ನು, ಮುಂಡಕ ಉಪನಿಷತ್ತಿನ ಮೊದಲನೆಯ ಮುಂಡಕದ ಅಂತ್ಯದಲ್ಲಿ "ಅಮೃತಃ ಸ ಪುರುಷೋ ಹ್ಯವ್ಯಯಾತ್ಮಾ" ಎಂದು ವರ್ಣಿಸ

1. ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ ।
ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥
(ಪ್ರ. ೬ ೬)

ಲಾಗಿದೆ "ಅಕ್ಷರಂ, ಪುರುಷಂ, ಸತ್ಯಂ" ಎಂಬ ವರ್ಣನೆಯೂ ಇದೆ. 'ಈ ವಿಶ್ವವೆಲ್ಲವೂ ಪುರುಷನೆ; ಕರ್ಮ, ತಪಸ್ಸು, ಬ್ರಹ್ಮ ಮತ್ತು ಶ್ರೇಷ್ಠವಾದ ಅಮೃತವೂ ಅವನೇ' ಎಂದು ಎರಡನೆಯ ಮುಂಡಕದಲ್ಲಿ ಹೊಗಳಿದೆ "ಕರ್ತಾರಂ, ಈಶಂ, ಪುರುಷಂ, ಬ್ರಹ್ಮಯೋನಿಂ" ಎಂಬ ವರ್ಣನೆಯು ಮೂರನೆಯ ಮುಂಡಕದಲ್ಲಿದೆ. ಕಾಮನೆಗಳನ್ನು ತೊರೆದು ಪುರುಷನ ಉಪಾಸನೆಯನ್ನು ಮಾಡುನವರು ಸೃಷ್ಟಿಯ ಬೀಜವನ್ನು ಅತಿಕ್ರಮಿಸುವರೆಂದೂ ಇದರಲ್ಲಿ ಹೇಳಿದೆ. "ವಿದ್ವಾನ್....ಪರಾತ್ಪರಂ ಪುರುಷಮುಪೈತಿ ದಿವ್ಯಂ" ಎಂದರೆ ಜ್ಞಾನಿಗಳು ಪರಾತ್ಪರನೂ, ದಿವ್ಯನೂ ಆದ ಪುರುಷನನ್ನು ಸೇರುವರು ಎಂದು ಈ ಉಪನಿಷತ್ತಿನ ಕೊನೆಯಲ್ಲಿ ಹೇಳಿದೆ. ಪುರುಷನೆಂದರೆ ಪರಬ್ರಹ್ಮವೆಂಬುದೇ ಮುಂಡಕೋಪನಿಷತ್ತಿನ ಅಭಿಪ್ರಾಯ.

## ಮಾಂಡೂಕ್ಯೋಪನಿಷತ್ತಿನಲ್ಲಿ 'ಪುರುಷ' ಕಲ್ಪನೆ

ಉಪನಿಷತ್ತುಗಳಲ್ಲೆಲ್ಲ ಅತ್ಯಂತ ಚಿಕ್ಕದಾದರೂ ಅತಿ ಶ್ರೇಷ್ಠವಾದುದೆಂದು ನಂಬಲ್ಪಟ್ಟ ಮಾಂಡೂಕ್ಯೋಪನಿಷತ್ತು ಪರಾತ್ಪರವಾದ ಪರಮತತ್ತ್ವವನ್ನು ಚೆನ್ನಾಗಿ ವರ್ಣಿಸುತ್ತದೆ. ಅದರ ಏಳನೆಯ ಮಂತ್ರದಲ್ಲಿ "ಪ್ರಪಂಚೋಪಶಮಂ, ಶಾಂತಂ, ಶಿವಂ, ಅದ್ವೈತಂ, ಚತುರ್ಥಂ" ಎಂದು ಮೊದಲಾಗಿ ವಿವರಿಸಿದೆ. ಹನ್ನೆರಡನೆಯ ಮಂತ್ರದಲ್ಲಿ ಅಮಾತ್ರಃ, ಚತುರ್ಥಃ ಅವ್ಯವಹಾರ್ಯಃ, ಪ್ರಪಂಚೋಪಶಮಃ, ಶಿವಃ, ಅದ್ವೈತಃ" ಎಂದು ಹೇಳಿದೆ.

ಈ ಉಪನಿಷತ್ತಿನಲ್ಲಿ ಹನ್ನೆರಡೇ ಮಂತ್ರಗಳಿರುವುವೆಂಬುದು ಶ್ರೀ ಶಂಕರಾಚಾರ್ಯರ ನಿಲುವು ಇದಕ್ಕೆ ಸಂಬಂಧಪಟ್ಟ ಆಗಮಪ್ರಕರಣದ ಕಾರಿಕೆಗಳಿಗೂ ಶ್ರೀ ಶಂಕರಾಚಾರ್ಯರು ಭಾಷ್ಯವನ್ನು ಬರೆದಿರುವರಾದರೂ, ಅವುಗಳು ಆ ಉಪನಿಷತ್ತಿನ ಭಾಗವೆಂದು ಅವರು ಎಣಿಸುವುಲ್ಲ. ಆದರೆ ಮಧ್ವಾಚಾರ್ಯರೂ, ರಾಮಾನುಜೀಯಸಿದ್ಧಾಂತಪ್ರತಿಪಾದಕರಾದ ಕೂರನಾರಾಯಣರೂ ಹೇಳುವಂತೆ ಆಗಮಪ್ರಕರಣದ ಕಾರಿಕೆಗಳೂ ಉಪನಿಷತ್ತಿನ ಭಾಗವೆನ್ನುವುದಾದರೆ–ಅದರಲ್ಲಿ ಪುರುಷನೇ ಎಲ್ಲವನ್ನು ಹುಟ್ಟಿಸುವನೆಂದು ಹೇಳಿದೆ :

ಪ್ರಭವಃ ಸರ್ವಭಾವಾನಾಂ ಸತಾಮಿತಿ ವಿನಿಶ್ಚಯಃ ।
ಸರ್ವಂ ಜನಯತಿ ಪ್ರಾಣಶ್ಚೇತೋಂಽಶೂನ್ ಪುರುಷಃ ಪೃಥಕ್ ॥

ಕಾರಿಕೆಯಲ್ಲಿಯೂ ಪರಾತ್ಪರವನ್ನು "ಈಶಾನಃ, ಪ್ರಭುಃ, ಅವ್ಯಯಃ ಅದ್ವೈತಃ" ಎಂದೂ, "ದ್ವೈತಸ್ಯೋಪಶಮಃ, ಶಿವಃ, ಓಂಕಾರಃ" ಎಂದೂ ಹೇಳಿದೆ

## ತೈತ್ತಿರೀಯ ಉಪನಿಷತ್ತಿನಲ್ಲಿ "ಪುರುಷ" ಕಲ್ಪನೆ

ತೈತ್ತಿರೀಯೋಪನಿಷತ್ತಿನಲ್ಲಿ ಪರಬ್ರಹ್ಮದ ವ್ಯಾಪಕತೆಯನ್ನು ಪಂಚ ಕೋಶಗಳ ವಿವರಣೆಯ ಮೂಲಕ ಉಪದೇಶಿಸಿರುವುದರಲ್ಲಿ ವೈಶಿಷ್ಟ್ಯವಿದೆ. ಈ ಕೋಶಗಳಲ್ಲಿ ಅತ್ಯಂತ ಸ್ಥೂಲವಾದುದು ಅನ್ನರಸಮಯ ಪುರುಷಕೋಶ; ಇದು ಅದಕ್ಕಿಂತ ಸೂಕ್ಷ್ಮವಾದ ಪ್ರಾಣಮಯ ಪುರುಷಕೋಶದಿಂದ ವ್ಯಾಪ್ತವಾಗಿದೆ. ಪ್ರಾಣಮಯಕೋಶವು ಅದಕ್ಕಿಂತ ಸೂಕ್ಷ್ಮವಾದ ಮನೋಮಯ ಪುರುಷನಿಂದ ವ್ಯಾಪ್ತವಾಗಿದೆ. ಮನೋಮಯ ಪುರುಷಕೋಶವು ವಿಜ್ಞಾನಮಯ ಪುರುಷಕೋಶದಿಂದ ವ್ಯಾಪ್ತವಾಗಿದೆ. ಈ ವಿಜ್ಞಾನಮಯ ಪುರುಷ ಕೋಶವು ಆನಂದಮಯ ಪುರುಷಕೋಶದಿಂದ ವ್ಯಾಪ್ತವಾಗಿದೆ. ಈ ಮೀಮಾಂಸೆಯೆಲ್ಲವೂ ತೈತ್ತಿರೀಯ ಉಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿದೆ[1]. ಈ ಬ್ರಹ್ಮಾನಂದಮೀಮಾಂಸೆಯು ಈ ಉಪನಿಷತ್ತಿನ ಕೊನೆಯ ವಲ್ಲಿಯಾದ ಭೃಗುವಲ್ಲಿಯಲ್ಲಿ ಮುಂದುವರಿಯುವುದು. ಭೃಗುವು ತಪಸ್ಸನ್ನು ಮಾಡಿ ಈ ಪುರುಷರಲ್ಲಿ ಯಾರು ಜಗತ್ಕಾರಣರು ಎಂಬುದನ್ನು ಅರಸುತ್ತ

---

1. ಅನ್ನಾತ್ ಪುರುಷಃ, ಸ ಏವ ಪುರುಷೋಽನ್ನರಸಮಯಃ,...... ಏತಸ್ಮಾತ್ ಅನ್ನರಸಮಯಾತ್, ಅನ್ಯೋಽಂತರ ಆತ್ಮಾ ಪ್ರಾಣಮಯಃ, ತೇ ನೈಷಪೂರ್ಣಃ,... ಏತಸ್ಮಾತ್ ಪ್ರಾಣಮಯಾತ್, ಅನ್ಯೋಽಂತರ ಆತ್ಮಾ ಮನೋಮಯಃ ತೇ ನೈಷಪೂರ್ಣಃ, ಸ ಏವ ಪುರುಷವಿಧಃ... ಏತಸ್ಮಾತ್ ಮನೋಮಯಾತ್ ಅನ್ಯೋಽಂತರ ಆತ್ಮಾ ವಿಜ್ಞಾನಮಯಃ ತೇನೈಷಪೂರ್ಣಃ ಏತಸ್ಮಾತ್ ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾ ಆನಂದಮಯಃ, ತೇ ನೈಷ ಪೂರ್ಣಃ, ಸ ವಾ ಏಷ ಪುರುಷವಿಧಃ... ಆನಂದ ಆತ್ಮಾ.

ಹೋಗಿ ಅನ್ನಮಯಪುರುಷನಿಂದ ಹಿಡಿದು ಕ್ರಮವಾಗಿ ಉಳಿದ ಪುರುಷ ಜಗತ್ಕಾರಣರೋ ಹೇಗೆ ಎಂಬುದನ್ನು ವಿಚಾರಮಾಡಿ ಕೊನೆಯಲ್ಲಿ ಆನಂದ ಮಯ ಪುರುಷನಿಂದಲೇ ಜಗದ ಉತ್ಪತ್ತಿ, ರಕ್ಷಣೆ ಮತ್ತು ಲಯಗಳೆಂದು ತೀರ್ಮಾನಿಸುವನು[1]. ಸಚ್ಚಿದಾನಂದಸ್ವರೂಪನಾದ ಈ ಪರಮಪುರುಷನು ಹೃದಯಾಕಾಶದಲ್ಲಿರುವನೆಂದೂ, ಅಮೃತನೆಂದೂ, ಹಿರಣ್ಮಯನೆಂದೂ ತೈತ್ತಿರೀಯ ಉಪನಿಷತ್ತಿನ ಪ್ರಥಮವಲ್ಲಿಯಲ್ಲಿಯೇ ಹೇಳಿದೆ[2].

## ಐತರೇಯ ಉಪನಿಷತ್ತಿನಲ್ಲಿ "ಪುರುಷ" ಕಲ್ಪನೆ

ಪರಬ್ರಹ್ಮವೆಂಬ ಅಂತಿಮಸ್ಥಿತಿಗೆ "ಸತ್"ಪದವನ್ನು ಕೆಲವು ಉಪನಿ ಷತ್ತುಗಳಲ್ಲಿ ಉಪಯೋಗಿಸಿರುವುದಾದರೂ ಅಸತ್‌ಪದವನ್ನು ಅದಕ್ಕೆ ಉಪಯೋಗಿಸಿ, ಅದರಿಂದ "ಸತ್" ಹುಟ್ಟಿತೆಂದು ಹೇಳಿ 'ಸತ್"ಪದವನ್ನು ಪರಬ್ರಹ್ಮದಿಂದ ಹೊರಹೊಮ್ಮಿದ ಎರಡನೆಯ ಸ್ಥಿತಿಯನ್ನು ಹೇಳಲು ಉಪಯೋಗಿಸಿರುವುದು ಉಂಟಷ್ಟೆ. ಹಾಗೆಯೇ ಪುರುಷಸೂಕ್ತದಲ್ಲಿಯೂ ಮತ್ತೆ ಮೇಲೆ ಹೇಳಿದ ಅನೇಕ ಆಧಾರಗಳಲ್ಲಿಯೂ ಪುರುಷಶಬ್ದವನ್ನು ಪರಬ್ರಹ್ಮದಿಂದ ಹೊರಹೊಮ್ಮಿದ ಎರಡನೆ ಸ್ಥಿತಿಯನ್ನು ಹೇಳಲು ಉಪ ಯೋಗಿಸುವುದುಂಟು. ಶತಪಥಬ್ರಾಹ್ಮಣದಲ್ಲಿ ಹಾಗೆ ಪುರುಷಶಬ್ದವನ್ನು ಉಪಯೋಗಿಸಿ ಇದೆಯೆಂದು ಹಿಂದೆ ಹೇಳಲಾಯಿತು. ಐತರೇಯ ಉಪನಿ ಷತ್ತಿನಲ್ಲಿ 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' ಎಂದರೆ ಎಲ್ಲಕ್ಕೂ ಮೊದಲು ಪರಮಾತ್ಮತತ್ತ್ವವೊಂದೇ ಇತ್ತೆಂದು ಹೇಳಿವೆ. ಅದು ಐದು ಲೋಕ ಗಳನ್ನು ಸೃಜಿಸಿ, ಲೋಕಪಾಲಕರನ್ನು ಸೃಜಿಸಲಪೇಕ್ಷಿಸಿತು; ಆ ಬಳಿಕ 'ಸೋದ್ಭ್ಯ ಏವ ಪುರುಷಂ ಸಮುದ್ಧೃತ್ಯಾ ಮೂರ್ಛಯತ್' ಎಂದರೆ ಆ ಪರಮಾತ್ಮತತ್ತ್ವವು ನೀರಿನೊಳಗಿಂದ ಪುರುಷನನ್ನು ಉದ್ಭವ ಮಾಡಿ ಮೂರ್ತಸ್ವರೂಪವನ್ನು ಕೊಟ್ಟಿತು ಎಂದು ಹೇಳಿದೆ.

---

1. ಆನಂದೋ ಬ್ರಹ್ಮೇತಿ ವ್ಯಜಾನಾತ್.
2. ಸ ಯ ಏಷೋಽಂತ ಹೃದಯ ಆಕಾಶಃ, ತಸ್ಮಿನ್ನಯಂ ಪುರುಷೋ ಮನೋಮಯಃ ಅಮೃತೋ ಹಿರಣ್ಮಯಃ.

## ಛಾಂದೋಗ್ಯದಲ್ಲಿ 'ಪುರುಷ' ಕಲ್ಪನೆ

ಛಾಂದೋಗ್ಯ ಉಪನಿಷತ್ತಿನಲ್ಲಿ (೫-೧೮-೨) ವೈಶ್ವಾನರನನ್ನು ಎಂದರೆ ನರರೆಲ್ಲರಿಗೂ ಆತ್ಮನಾಗಿರುವ ವಿಶ್ವಾತ್ಮನನ್ನು ವರ್ಣಿಸಿರುವುದು, ಪುರುಷ ಸೂಕ್ತದ ೧೩-೧೪ನೆಯ ಮಂತ್ರಗಳಲ್ಲಿ ಪರಮಪುರುಷನನ್ನು ವರ್ಣಿಸಿರುವಂತೆಯೇ ಇದೆ. ಪುರುಷಸೂಕ್ತದ ಆ ಮಂತ್ರಗಳ ವಿವರಣೆಯಲ್ಲಿ ಇದನ್ನು ಉದಾಹರಿಸಿ ವಿವೇಚಿಸಲಾಗುವುದು ಈ ಉಪನಿಷತ್ತಿನಲ್ಲಿಯೇ (೧-೬-೬) "ಅಂತರಾದಿತ್ಯೇ ಹಿರಣ್ಮಯಃ ಪುರುಷಃ" ಎಂದು ಹೇಳಿರುವುದರಲ್ಲಿ ಆದಿತ್ಯನಲ್ಲಿ ಅಂತರ್ಗತನಾಗಿರುವ ಪುರುಷನು ಹಿರಣ್ಮಯನೆಂಬ ವರ್ಣನೆಯಿದೆ ಇಲ್ಲಿ ಹಿರಣ್ಮಯ ಎಂದರೆ 'ಜ್ಯೋತಿರ್ಮಯ'—ಎಂದರ್ಥವೆಂದು ಶಾಂಕರಭಾಷ್ಯದಲ್ಲಿ ಹೇಳಿದೆ.

## ಬೃಹದಾರಣ್ಯಕದಲ್ಲಿ 'ಪುರುಷ' ಕಲ್ಪನೆ

ಬೃಹದಾರಣ್ಯಕೋಪನಿಷತ್ತಿನಲ್ಲಿ (೫-೫-೨) ಆದಿತ್ಯಮಂಡಲಾಂತರ್ಗತನಾದ ಪುರುಷನಿಗೂ, ಬಲಗಣ್ಣಿನಲ್ಲಿ ಪ್ರಕಾಶಿಸುವ ಪುರುಷನಿಗೂ ತಾದಾತ್ಮ್ಯವನ್ನು ಹೇಳಿ, ಆ ಪುರುಷನು ಸತ್ಯಬ್ರಹ್ಮವೆಂದು ಹೇಳಿದೆ.[1] ಈ ಪುರುಷನು ಮನೋಮಯನು, ಪ್ರಕಾಶಮಾನನು, ಹೃದಯದೊಳಗೆ ಭತ್ತದಕಾಳಿನಷ್ಟು ಅಥವಾ ಜವೆಯಕಾಳಿನಷ್ಟು ಸೂಕ್ಷ್ಮನಾಗಿ ಇರುತ್ತಾನೆಂದೂ ಎಲ್ಲಕ್ಕೂ ಈಶಾನನೆಂದೂ ಎಲ್ಲವನ್ನೂ ಆಳುವವನೆಂದೂ ಈ ಉಪನಿಷತ್ತಿನಲ್ಲಿ (೫-೬-೧) ಹೇಳಿದೆ.[2]

ಇಲ್ಲಿಯವರೆಗೆ ದಶೋಪನಿಷತ್ತುಗಳಲ್ಲಿನ ಮತ್ತು ಗೀತೆಯಲ್ಲಿನ

---

1. ತದ್ಯತ್ ತತ್ ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ

2. ಮನೋಮಯೋಽಯಂ ಪುರುಷೋ ಭಾಃ ಸತ್ಯಃ; ತಸ್ಮಿನ್ನಂತರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ

'ಪುರುಷಕಲ್ಪನೆ' ಯನ್ನು ಪುರುಷಸೂಕ್ತದ 'ಪುರುಷಕಲ್ಪನೆ'ಯೊಡನೆ ಪರ್ಯಾಲೋಚಿಸಿದ್ದಾಯಿತು. ಇನ್ನು ದಶೋಪನಿಷತ್ತುಗಳ ಸಾರವೆನಿಸಿದ ಶ್ವೇತಾಶ್ವತರ ಉಪನಿಷತ್ತಿನಲ್ಲಿನ ಪುರುಷಕಲ್ಪನೆಯು ಸಮೀಕ್ಷಣಾರ್ಹವಾದೆ.

## ಶ್ವೇತಾಶ್ವತರೋಪನಿಷತ್ತಿನಲ್ಲಿ 'ಪುರುಷ' ಕಲ್ಪನೆ

ಪುರುಷಸೂಕ್ತ ಮತ್ತು ನಾಸದೀಯಸೂಕ್ತಗಳ ಹಿನ್ನೆಲೆಯು ಶ್ವೇತಾಶ್ವತರ ಉಪನಿಷತ್ತಿಗೆ ಇರುವುದರಿಂದ ಆ ಉಪನಿಷತ್ತಿನ 'ಪುರುಷ' ಕಲ್ಪನೆಯ ವಿಷಯವು ವಿಸ್ತಾರವಾದ ವಿವೇಚನೆಗೆ ಒಳಗಾಗುವ ಆವಶ್ಯಕತೆಯು ಇದೆಯಾದರೂ ಇಲ್ಲಿ ಅದು ಅಪ್ರಕೃತವಾಗಿದೆ. ಶ್ವೇತಾಶ್ವತರ ಉಪನಿಷತ್ತಿನ ಐದು ಮಂತ್ರಗಳನ್ನೂ, ಅವುಗಳ ಪದ್ಯಾನುವಾದವನ್ನೂ ಕೊಟ್ಟು ಅದರ ನಿಲುವಿನ ದರ್ಶನವನ್ನು ಮಾಡಲಾಗುವುದು :

ಸರ್ವಾನನ ಶಿರೋಗ್ರೀವಃ ಸರ್ವಭೂತಗುಹಾಶಯಃ ।
ಸರ್ವವ್ಯಾಪೀ ಸ ಭಗವಾನ್ ತಸ್ಮಾತ್ ಸರ್ವಗತಃ ಶಿವಃ ॥

ಮಹಾನ್ ಪ್ರಭುರ್ವೈ ಪುರುಷಃ ಸತ್ತ್ವಸ್ಯೈಷ ಪ್ರವರ್ತಕಃ ।
ಸುನಿರ್ಮಲಾಮಿಮಾಂ ಪ್ರಾಪ್ತಿಮೀಶಾನೋ ಜ್ಯೋತಿರವ್ಯಯಃ ॥

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥

ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಂ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥

ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ ।
ಸರ್ವಸ್ಯ ಪ್ರಭುಮೀಶಾನಂ ಸರ್ವಸ್ಯ ಶರಣಂ ಸುಹೃತ್ ॥

ಪದ್ಯಾನುವಾದ—

ಕಂದ—ಸರ್ವಾನನಕಂಠಶಿರಂ ।
ಸರ್ವಗತಂ ತಾಂ ಪರಮಶಿವಂ ಭಗವಂತಂ ।
ಸರ್ವವ್ಯಾಪಿಯೆನಿಸುತಂ ।
ಸರ್ವರ ಹೃದಯಾಂತರಾಳದೊಳ್ ನೆಲೆಸಿರ್ಪಂ ॥

ಪುರುಷಂ ಮಹಾಪ್ರಭುವೆ ವಲ್ ।
ಪರಮಜ್ಯೋತಿಯನನನ್ಯಯಂ ಮೇಣೀಶಂ ।
ಪರನಿರ್ಮಲ ಮುಕ್ತಿಪ್ರದ ।
ಸುರುಚಿರ ಸತ್ವಪ್ರವರ್ತಕಂ ಭಗವಂತಂ ॥

ಪುರುಷಂ ಸಹಸ್ರಶೀರ್ಷಂ ।
ಪರಮಪದಸಹಸ್ರನೈದೆ ನಯನಸಹಸ್ರಂ ।
ಧರೆಯೆಲ್ಲಮನಾವರಿಸು ।
ತ್ರಿರದೆ ದಶಾಂಗುಲದೆ ಮೀಱಿಯುದನುರೆ ನಿಲ್ವಂ ॥

ಪುರುಷಂ ಸರ್ವಮಿದರಿಯಲ್ ।
ಪುರುಷಂ ತಾಂದಲ್ ಸಮಸ್ತಭೂತಂ ಭವ್ಯಂ ।
ಹೊರಹೊಮ್ಮಿಪಸವನನ್ನಮ ।
ನುರೆ ಪರಮಾತ್ಮಂ ಪರತರ ಮೋಕ್ಷಾಧೀಶಂ ॥

ಸರ್ವೇಂದ್ರಿಯ ಗುಣವರ್ಜಿತ ।
ಸುರ್ವಿಯೊಳರಿಯೆ ಸಕಲೇಂದ್ರಿಯ ಗುಣಾಭಾಸಂ ।
ಸರ್ವಪ್ರಭುವನನೀಶಂ ।
ಸರ್ವರ ಶರಣಾಗತಿಯೆನೆ ಸರ್ವಸುಹೃತ್‌ದಲ್ ॥

ಮೇಲ್ಕಂಡ ಮಂತ್ರಗಳು ಪುರುಷಸೂಕ್ತದಲ್ಲಿ ಹೇಳಿರುವುದನ್ನೇ ಹೇಳುತ್ತವೆ. ಪುರುಷಸೂಕ್ತೋಕ್ತ 'ಪುರುಷ'ನನ್ನು, ಶ್ವೇತಾಶ್ವತರ ಉಪನಿಷತ್ತಿನಲ್ಲಿ ಶಿವ, ಈಶಾನ, ಹರ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ.

ಭಗವದ್ಗೀತೆಯಲ್ಲಿಯೂ, ಪುರಾತನ ಉಪನಿಷತ್ತುಗಳಲ್ಲಿಯೂ ಇರುವ ಪುರುಷಕಲ್ಪನೆಯ ದರ್ಶನವನ್ನು ಮಾಡಲಾಯಿತು. ತ್ರಿಮೂರ್ತಿಗಳಿಗೂ ಕಾರಣವಾದ ಪರಬ್ರಹ್ಮವೇ ಪುರುಷಸೂಕ್ತೋಕ್ತ ಪುರುಷಶಬ್ದದಿಂದ ನಿರ್ದೇಶಿಸಲ್ಪಟ್ಟಿದೆ. ಪುರುಷಸೂಕ್ತೋಕ್ತ ಪರಬ್ರಹ್ಮವನ್ನು ತ್ರಿಮೂರ್ತಿಗಳಿಗೂ ಕಾರಣನಾದ ಆದಿನಾರಾಯಣನು–ಎಂದು ಹೆಸರಿಸಬಹುದೇ ಎಂಬ ಪ್ರಶ್ನೆಗೆ ಆಗಬಹುದು—ಎಂಬುದೇ ಸರಿಯಾದ ಉತ್ತರ ; ಏಕೆಂದರೆ ಪುರಾತನೋಪನಿಷತ್ತುಗಳಲ್ಲಿ ಆ ಪರಬ್ರಹ್ಮವನ್ನು ಶಿವ, ನಾರಾಯಣ ಎಂಬ ಹೆಸರುಗಳಿಂದ ಕರೆಯಲ್ಪಟ್ಟಿರುವುದೆಂದೂ ಶಿವನಾರಾಯಣರಿಗೆ ಕಲ್ಪಿಸಿರುವ ಭೇದವು

ಇತ್ತೀಚಿನದೆಂಬೂ ಹಿಂದೆಯೇ ಹೇಳಲಾಯಿತು. ಘೃತವೆಂದರೂ, ಆಜ್ಯ ವೆಂದರೂ ಹಾಗೆ ಕರೆಯಲ್ಪಟ್ಟ ವಸ್ತುವಿನ ಉಪಯುಕ್ತತೆಯಲ್ಲಿ ವ್ಯತ್ಯಾಸವಾಗದು. ಆದರೆ ಅದನ್ನು ಆಜ್ಯವೆಂದೇ ಕರೆಯಬೇಕೆಂಬು ದಾಗಲೀ, ಘೃ ತ ವೆಂ ದೇ ಕರೆಯಬೇಕೆಂಬುದಾಗಲೀ ತಪ್ಪು. ಪುರುಷಸೂಕ್ತವನ್ನು ವೈಷ್ಣವರೂ, ಸ್ಮಾರ್ತರೂ ವಿಷ್ಣುವಿನ ಪೂಜೆ ಯಲ್ಲಿ ವಿನಿಯೋಗಿಸುತ್ತಾರೆ. ಆದುದರಿಂದ ಹಾಗೆ ಮಾಡುವುದು ಸರಿ ಯೆಂದು ಸಿದ್ಧಾಂತ ಮಾಡಬೇಕಾಗಿಲ್ಲ. ಆದರೆ ಶೈವರು ಸಾಮಾನ್ಯವಾಗಿ ಪುರುಷಸೂಕ್ತವು ವಿಷ್ಣುಪರ, ಶಿವಪರವಾದುದಲ್ಲ–ಎಂದು ನಂಬಿ ಅದನ್ನು ಶಿವಸ ಪೂಜೆಯಲ್ಲಿ ಉಪಯೋಗಿಸುತ್ತಿಲ್ಲ: ಶೈವರು ಶಿವಾರ್ಚನೆಯಲ್ಲಿ ಶ್ರೀ ರುದ್ರ ವನ್ನು ಉಪಯೋಗಿಸುವಂತೆಯೇ ಪುರುಷಸೂಕ್ತವನ್ನು ಉಪಯೋಗಿಸ ಬಹುದೆಂಬುದನ್ನು ತೋರಿಸುವುದು ಆವಶ್ಯವಾಗಿದೆ. ಶ್ರೀಕರಭಾಷ್ಯದಲ್ಲಿ ಉಕ್ತವಾದ ದೀರ್ಘವಾದ ಶ್ರುತಿಸ್ಮೃತ್ಯಾದ್ಯಾಧಾರೋಪೇತವಾದ ಸಿದ್ಧಾಂತದ ಸ್ವಲ್ಪ ಭಾಗವನ್ನು ಸಂಕ್ಷೇಪಿಸಿ ಅನುವಾದ ಮಾಡಿಕೊಟ್ಟಿದೆ:

ಉಪಕ್ರಮೋಪಸಂಹಾರಾದಿ ಷಡ್ವಿಧಲಿಂಗಗಳಿಂದ ಪುರುಷ ಸೂಕ್ತವು ಪರಶಿವನ ಪರವೆಂದು ಈಗ ನಿರ್ದೇಶಿಸಲ್ಪಡುತ್ತದೆ: "ಪುರುಷೋ ವೈ ರುದ್ರಃ" 'ಪುರುಷಂ ಕೃಷ್ಣಪಿಂಗಳಂ' "ಪುರಾತ ನೋಽಹಂ ಪುರುಷೋಽಹಮೀಶಃ" ಇತ್ಯಾದಿ ನೂರಾರು ಶ್ರುತಿಗಳಿಂದ ಪುರುಷಶಬ್ದವು ಶಿವಪರವೆಂದು ವ್ಯವಸ್ಥಿತವಾಗಿದೆ. ಅದರಲ್ಲೂ ಈಶಾನ ಪದವು ಶಿವನಲ್ಲಿಯೇ ರೂಢವಾಗಿದೆ; ಶಿವಕೇಶವರು ಪುರುಷ ಪ್ರಕೃತಿ ಗಳೆಂಬುದು ಶ್ರುತಿಸ್ಮೃತಿಪುರಾಣಾಗಮಸಿದ್ಧವಾದುದಾಗಿದೆ. ಸಾಮಾ ಮ್ನಾಯ ರುದ್ರಸೂಕ್ತದಲ್ಲಿ:

ಏಕೈವ ಶಕ್ತಿಃ ಪರಮೇಶ್ವರಸ್ಯ ಪ್ರಯೋಜನಾರ್ಥಾಯ ಚತುರ್ವಿಧಾಽಭೂತ್ ।
ಭೋಗೇ ಭವಾನೀ, ಪುರುಷೇಷು ವಿಷ್ಣುಃ ಕ್ರೋಧೇಚಕಾಳೀ ಸಮರೇಚದುರ್ಗಾ ॥

ಪರಮೇಶ್ವರನ ಶಕ್ತಿಯು ಭೋಗಕಾಲದಲ್ಲಿ ಭವಾನಿಯಾಗಿಯೂ, ಪುರುಷ ರೂಪದಲ್ಲಿ ವಿಷ್ಣುವಾಗಿಯೂ, ಕೋಪದಲ್ಲಿ ಕಾಳಿಯಾಗಿಯೂ, ಯುದ್ಧದಲ್ಲಿ ದುರ್ಗಿಯಾಗಿಯೂ ಆಗುವಳೆಂದು ಹೇಳಿದೆ. ಸ್ಕಾಂದಪುರಾಣದಲ್ಲಿ:

ಪುರುಷೋನಾಮ ಸಂಪೂರ್ಣಸ್ಸಾಂಬಮೂರ್ತಿಸ್ಸನಾತನಃ ।
ವಾಸುದೇವಃ ಪರಾಶಕ್ತಿರಿತಿ ವೇದೇ ಪ್ರಪಂಚಿತಂ ॥

ಎಂದರೆ ಸನಾತನನೂ, ಸಂಪೂರ್ಣನೂ ಆದ ಸಾಂಬಮೂರ್ತಿಯು ಪುರುಷನೆಂದೂ, ವಾಸುದೇವನು ಪರಾಶಕ್ತಿಯೆಂದೂ ಹೇಳಿದೆ ಗೀತೆಯಲ್ಲಿ 'ವಾಸುದೇವಃ ಪರಾಪ್ರಕೃತಿಃ' ಎಂದು ಹೇಳಿದೆ. ಕೂರ್ಮಪುರಾಣದಲ್ಲಿ 'ಪ್ರಕೃತಿಃ ಪರಮೋ ವಿಷ್ಣುಃ ಪುರುಷಃ. ಪರಮಶ್ಶಿವಃ' ಎಂದು ಹೇಳಿದೆ. ಹೀಗೆ ಉಪಕ್ರಮದಲ್ಲಿಯೇ ಇರುವ 'ಸಹಸ್ರಶೀರ್ಷಾ ಪುರುಷಃ' ಎಂಬ ವಾಕ್ಯದ ಪುರುಷಶಬ್ದವು ಶಿವಪರವಾದುದಾಗಿದೆ. ಇನ್ನು ಪುರುಷಸೂಕ್ತದ ಮಧ್ಯಭಾಗದಲ್ಲಿ "ಯಜ್ಞೇನ ಯಜ್ಞಮಯಜಂತ ದೇವಾಃ" ಎಂದು ಹೇಳಿರುವುದರಿಂದ ಪುರುಷಸೂಕ್ತವು ಶಿವಪರವೆಂಬುದನ್ನು ಅಭ್ಯಾಸ ಎಂದರೆ ಪುನರುಕ್ತಿಯು ದೃಢೀಕರಿಸುತ್ತದೆ. ಯಜ್ಞೇನ ಎಂದರೆ ವಿಷ್ಣುರೂಪ ಪಶುವಿನಿಂದ. ಯಜ್ಞಂ ಎಂದರೆ ಶಿವನ ಪ್ರೀತ್ಯರ್ಥವಾಗಿ ಯಜ್ಞವನ್ನು, ದೇವಾಃ ಅಯಜಂತ ಎಂದರೆ ಬ್ರಹ್ಮಾದಿ ದೇವತೆಗಳು ಆಚರಿಸಿದರು ಎಂದರ್ಥ. "ಯಜ್ಞೋವೈ ವಿಷ್ಣುಃ" ಎಂಬ ಆಧಾರದಿಂದ ಯಜ್ಞವೆಂದರೆ ವಿಷ್ಣುವೆಂಬುದು ಸ್ಪಷ್ಟ. "ಆವೋರಾಜಾನಮಧ್ವರಸ್ಯ ಹೋತಾರಂ ರುದ್ರಂ" ಎಂಬ ಶ್ರುತಿಯಲ್ಲಿ ಯಜ್ಞೇಶ್ವರನು ರುದ್ರನೆಂಬುದು ಸ್ಪಷ್ಟವಾಗಿದೆ. ಋಗ್ವೇದದಲ್ಲಿ "ಗಾಥಪತಿಂ ಮೇಧಪತಿಂ ರುದ್ರಂ" ಎಂದು ಹೇಳಿರುವುದೂ ಇದನ್ನು ದೃಢಪಡಿಸುತ್ತದೆ. ಸೂತಸಂಹಿತೆಯಲ್ಲಿ :

ಯಜ್ಞರೂಪಂ ಮಹಾವಿಷ್ಣುಂ ಯಜ್ಞೇ ಪಶ್ಯಂತಿ ಯೇದ್ವಿಜಾಃ ।
ಪ್ರಾಧಾನ್ಯೇನ ಮಹಾದೇವೋ ಯಜ್ಞದೇವೋ ಸ ಚಾಪರಃ ।
ಇತಿಜ್ಞಾತ್ವಾ ಯಜಂತೇ ಯೇ ತೇ ವೈ ವಿಜ್ಞಾನಮಾಪ್ನುಯುಃ ॥

ಎಂದರೆ ಮಹಾವಿಷ್ಣುವನ್ನು ಯಜ್ಞರೂಪವಾಗಿಯೂ, ಮಹಾದೇವನನ್ನು ಯಜ್ಞದೇವನೆಂದೂ ತಿಳಿದು ಯಾರು ಪೂಜಿಸುತ್ತಾರೋ ಅವರು ಆತ್ಮಜ್ಞಾನವನ್ನು ಪಡೆವರು ಎಂದು ಹೇಳಿದೆ.

# ಪುರುಷಸೂಕ್ತ

## ತೃತೀಯ ದರ್ಶನ

**ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**
**ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥ ೧ ॥**

ಪ್ರತಿಪದಾರ್ಥ— ಪುರುಷಃ-ಪರಮಾತ್ಮನು, ಸಹಸ್ರಶೀರ್ಷಾ-ಸಾವಿರ ತಲೆಗಳುಳ್ಳವನು, ಸಹಸ್ರಾಕ್ಷಃ-ಸಾವಿರ ಕಣ್ಣುಗಳುಳ್ಳವನು, ಸಹಸ್ರಪಾತ್-ಸಾವಿರ ಪಾದಗಳನ್ನುಳ್ಳವನು, ಸಃ-ಅವನು, ಭೂಮಿಂ-ಲೋಕವನ್ನು, ವಿಶ್ವತಃ-ಸುತ್ತಲೂ, ವೃತ್ವಾ-ಆವರಿಸಿ, ದಶಾಂಗುಲಂ-ಹತ್ತು ಅಂಗುಲದಷ್ಟು, ಅತ್ಯತಿಷ್ಠತ್-ಅತಿಕ್ರಮಿಸಿರುವನು.

ಪದ್ಯಾನುವಾದ—

ಸಾವಿರದ ತಲೆಯುವನು ಸಾವಿರದ ಕಣ್ಣವನು ।
ಸಾವಿರದ ಪದದವನು ಪರಮಪುರುಷೋನ್ನತನು ।
ಆವರಿಸಿ ಮೂಜಗವ ಬಿಡದೆಯದನೆಲ್ಲವನು ।
ಭಾವಿಸೆ ದಶಾಂಗುಲಮತಿಕ್ರಮಿಸಿ ನಿಂದಿಹನು ॥

ಸರಳಾನುವಾದ-ಪುರುಷನು-ಸಾವಿರಾರುತಲೆ, ಕಣ್ಣು, ಪಾದಗಳಿಂದ ಜಗತ್ರಯವನ್ನೆಲ್ಲ ಆವರಿಸಿ, ಅದೆಲ್ಲವನ್ನು ಹತ್ತು ಅಂಗುಲದಷ್ಟು ಮೀರಿ, ಇರುವನು

---

ಸಾಯಣಭಾಷ್ಯಧಾರ—

ಸಹಸ್ರಶಬ್ದಸ್ಯೋಪಲಕ್ಷಣತ್ವಾತ್ ಅನಂತೈಃ ಶಿರೋಭಿಃ ಯುಕ್ತಃ; ಯಾನಿ ಸರ್ವಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾಂತಃ ಪಾತಿತ್ವಾತ್ ತದೀಯಾನ್ಯೇವ ಇತಿಸಹಸ್ರಶೀರ್ಷತ್ವಂ; ಏವಂಸಹಸ್ರಾಕ್ಷಿತ್ವಂ ಸಹಸ್ರಪಾದತ್ವಂಚ; ಭೂಮಿಂ-ಬ್ರಹ್ಮಾಂಡಗೋಲಕರೂಪಾಂ, ವಿಶ್ವತಃ-ಸರ್ವತಃ, ವೃತ್ವಾ-ಪರಿವೇಷ್ಟ್ಯ, ದಶಾಂಗುಲಮಿತಿ ಉಪಲಕ್ಷಣಂ; ಅತ್ಯತಿಷ್ಠತ್-ಅತಿಕ್ರಮ್ಯ ವ್ಯವಸ್ಥಿತಃ, ಬ್ರಹ್ಮಾಂಡಾದ್ ಬಹಿರಪಿ ಸರ್ವತಃ ವ್ಯಾಪ್ಯಾವಸ್ಥಿತಃ.

ಎಂದರೆ ಅಸಂಖ್ಯಾತ ಕಣ್ಣು, ಕಿವಿ ಮೊದಲಾದ ಅಂಗಗಳನ್ನು ಹೊಂದಿ ವಿಶ್ವವನ್ನು ಆವರಿಸಿ, ಅದನ್ನು ಮೀರಿ ಇರುವನೆಂದು ಭಾವ

ವಿಮರ್ಶಾತ್ಮಕ ವಿವರಣೆ—

ಸಾಯಣಭಾಷ್ಯದಲ್ಲಿನ ವಿವರಣೆಯಂತೆ ಸಹಸ್ರವೆಂದ ಮಾತ್ರಕ್ಕೆ ಸಾವಿರವೇ ಎಂದು ಅಭಿಪ್ರಾಯವಲ್ಲ ; ಸಹಸ್ರಪದವನ್ನು ಉಪಲಕ್ಷಣವಾಗಿ ಉಪಯೋಗಿಸಿರುವುದರಿಂದ ಆ ಪದಕ್ಕೆ ಅನಂತವೆಂದು ಅರ್ಥ ಮಾಡಿಕೊಳ್ಳ ಬೇಕು. ಪರಮಪುರುಷನು ಸರ್ವಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ರುವುದರಿಂದ ಸರ್ವಪ್ರಾಣಿಗಳ ಸರ್ವಶಿರಸ್ಸುಗಳೂ ಪರಮಾತ್ಮನ ಶಿರಸ್ಸುಗಳೇ; ಹಾಗೆಯೇ ಸರ್ವಪ್ರಾಣಿಗಳ ಇತರ ಅಂಗಗಳೂ ಪರಮಾತ್ಮನವೆ—ಎಂದು ತಿಳಿಯಬೇಕು. ದಶಾಂಗುಲಮತಿಕ್ರಮಿಸಿ ನಿಂದಿಹನು ಎಂದರೆ ಹತ್ತು ಅಂಗುಲ ಪರಿಮಿತಿಯುಳ್ಳ ಸ್ಥಳದಲ್ಲಿ ವಿಶ್ವವನ್ನು ಮೀರಿರುವನು ಎಂದಿರುವಲ್ಲಿ ದಶಾಂಗುಲವೆಂದರೆ ಹತ್ತು ಅಂಗುಲವೆಂದು ಅರ್ಥಮಾಡಲಾಗದು. ದಶಾಂಗುಲಪದವೂ ಸಹಾ ಉಪಲಕ್ಷಣವಾಗಿ ಉಪಯೋಗಿಲ್ಪಟ್ಟಿದೆ.

ಈ ಮಂತ್ರದಲ್ಲಿ ಮೊದಲು ಗಮನಿಸಬೇಕಾದುದು ಪುರುಷನೆಂದರೆ ಯಾರು ಎಂಬುದು. ಈ ವಿಷಯದಲ್ಲಿ ಸಾಕಾದಷ್ಟು ವಿವರಣೆಯನ್ನು ಎರಡನೆಯ ದರ್ಶನದಲ್ಲಿಯೇ ಕೊಡಲಾಗಿದೆ. ಮತ್ತೆ ಆ ವಿಷಯವನ್ನು ಇಲ್ಲಿ ವಿವರಿಸಿದರೆ ಚರ್ವಿತಚರ್ವಣವಾಗುವುದು. ಪುರುಷನೆಂದರೆ ತ್ರಿಮೂರ್ತಿಗಳಲ್ಲಿ ಒಬ್ಬರಾದ ಬ್ರಹ್ಮ, ವಿಷ್ಣು, ಮಹೇಶ್ವರರಾರೂ ಅಲ್ಲ. ಇವರೆಲ್ಲರಿಗೂ ಕಾರಣನಾದ ಪರಬ್ರಹ್ಮವೇ ಪುರುಷಶಬ್ದದಿಂದ ಇಲ್ಲಿ ಉಕ್ತವಾಗಿದೆಯೆಂದು ಹೇಳಿದರೆ ಸಾಕು.

ಸಹಸ್ರಶೀರ್ಷಾದಿಗಳು ಪುರುಷನಿಗೆ ಇವೆ—ಎಂಬುದರಲ್ಲಿನ ಪುರುಷ ವೆಂಬ ಪದದಲ್ಲಿ ವ್ಯಕ್ತಸ್ವರೂಪದ ಭಾವನೆಯೂ, ಪುಲ್ಲಿಂಗದ ಭಾವನೆಯೂ ಬರುವುದು ; ಸಹಸ್ರಶೀರ್ಷಾದಿಗಳುಳ್ಳದು ಎಂದು ಹೇಳಿರುವುದರಲ್ಲಿ

ರಾವಣನಿಗೆ ಹತ್ತು ತಲೆಗಳೂ, ಇಪ್ಪತ್ತೈದು ಕೈಗಳೂ ಇರುವಂತೆ, ಪರಮ ಪುರುಷನಿಗೆ ಸಹಸ್ರಶೀರ್ಷಾದಿ ಅಂಗಗಳು ಇರುವುವೋ ಏನೋ ಎಂಬ ಭಾವನೆ ಬರುವುದು. ಆದರೆ ಈ ಮಂತ್ರದ ಅಭಿಪ್ರಾಯವು ಇದೆಲ್ಲ ಅಲ್ಲ; ಸಹಸ್ರ ವೆಂಬ ಪದವು ಅನಂತ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಜಗತ್ತಿನಲ್ಲಿ ಅನಂತವಾದ ಪ್ರಾಣಿಗಳ ಅಂಗಗಳೆಲ್ಲವೂ ಪರಮಪುರುಷನವೆ; ಆ ಪರಮಾತ್ಮನ ಚೈತನ್ಯದಿಂದಲೇ ಅನಂತಪ್ರಾಣಿಗಳ ಅನಂತ ಅಂಗಗಳೆಲ್ಲವೂ ಅವವುಗಳ ಕಾರ್ಯವನ್ನು ಮಾಡುತ್ತವೆ. ಆ ಪರಮಪುರುಷನು ಪ್ರಾಣಿಗಳ ತನುವಿಗೆ ತನುವಾಗಿ, ಮನಕ್ಕೆ ಮನವಾಗಿ, ಕಣ್ಣಿಗೆ ಕಣ್ಣಾಗಿ, ಉಳಿದ ಆಯಾ ಅಂಗಗಳಿಗೆ ಆಯಾ ಅಂಗವಾಗಿ ಅವಕ್ಕೆ ಚೈತನ್ಯವನ್ನು ಕೊಟ್ಟು ಅವವುಗಳ ಕಾರ್ಯವನ್ನು ಮಾಡಿಸುತ್ತಾನೆ :

> ತನುವಿಂಗೆ ತನುರೂಪಾಗಿ ತನುವಿಗಾಧಾರವಾದೆ; ಮನಕ್ಕೆ ಮನದ ರೂಪಾಗಿ, ಮನಕ್ಕೆ ನೆನಹಿನ ಶಕ್ತಿಯನಿತ್ತು ಮನಕ್ಕಾಧಾರವಾದೆ; ಪ್ರಾಣಕ್ಕೆ ಪ್ರಾಣರೂಪಾಗಿ ಪ್ರಾಣಕ್ಕಾಧಾರವಾದೆ... ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರಾ.

ಕೇನೋಪನಿಷತ್ತಿನಲ್ಲಿ ಹೇಳಿರುವಂತೆ :

> ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್ ।
> ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ॥

ಎಂದರೆ :

> ಅದು ಕಿವಿಯ ಒಳಕಿವಿಯು, ಅದು ಮನದ ಒಳಮನವು ।
> ಅದು ವಾಕ್ಕಿನೊಳವಾಕ್ಕು, ಅದು ಜೀವದೊಳಜೀವ ॥

ಒಂದು ಕರ್ಮಶಾಲೆಯಲ್ಲಿ ವಿದ್ಯುಚ್ಛಕ್ತಿಯನ್ನು ಹರಿಯಬಿಟ್ಟ ಕೂಡಲೆ ದೀಪ ಗಳು ಉರಿಯುವುವು, ರೇಡಿಯೋ ಹಾಡುವುದು, ಬೀಸಣಿಗೆ ಬೀಸು ವುದು, ಗಾಲಿಗಳು ತಿರುಗಿ ಯಂತ್ರಗಳು ಅವವುಗಳ ಕಾರ್ಯವನ್ನು ಮಾಡುವುವು. ಇವೆಲ್ಲವನ್ನೂ ಚಲನೆಗೊಳಿಸುವುದು ವಿದ್ಯುಚ್ಛಕ್ತಿಯೆಂಬ ವಸ್ತು ಒಂದೆ :

ಒಂದೆ ವಸ್ತು ತನ್ನ ವಿಚಿತ್ರ ಮಹಿಮೆಯಿಂದ ಕೇಳುವಲ್ಲಿ ಕರ್ಣವಾಗಿ, ನೋಡುವಲ್ಲಿ ನೇತ್ರವಾಗಿ, ರುಚಿಸುವಲ್ಲಿ ರಸನೆಯಾಗಿ, ಪರಿಮಳಿಸುವಲ್ಲಿ ಘ್ರಾಣವಾಗಿ, ಸ್ಪರ್ಶಿಸುವಲ್ಲಿ ತ್ವಕ್ಕಾಗಿ, ನಿಂದೆ ನೀ ನೋಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ.

ಆದುದರಿಂದ ಆಲೋಚಿಸುವ ತಲೆಯು ನಮ್ಮದೆ ಏನು ? ನೋಡುವ ಕಣ್ಣು ನಮ್ಮದೆ ಏನು ? ಕೇಳುವ ಕಿವಿ ನಮ್ಮದೇ ಏನು ? ರುಚಿಯನರಿಯುವ ಜಿಹ್ವೆ ನಮ್ಮದೆ ಏನು ? ಇವೆಲ್ಲವೂ ನಿಜವನ್ನು ಅರಿದವರಿಗೆ ಪರಮಾತ್ಮನವೇ ಆಗುವುವು.

ಶಿರಮುಖಹೃದಯಬಾಹುಗಳೆಲ್ಲ ಶಿವನ ಅವಯವಂಗಳಾದವು ; ಶ್ರೋತ್ರ ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕೆಂಬುವೆಲ್ಲ ಶಿವನ ಇಂದ್ರಿಯಂಗಳಾದವು ; ಮನ, ಬುದ್ಧಿ, ಚಿತ್ತ, ಅಹಂಕಾರಗಳೆಲ್ಲ ಶಿವನ ಕರಣಂಗಳಾದವು; ಪ್ರಾಣಾಪಾನ ವ್ಯಾನೋದಾನ ಸಮಾನವೆಂಬಲ್ಲಿ, ಶಿವಚೈತನ್ಯವಿದ್ದುದಾಗಿ ಒಳಗಿದ್ದ ಚೇತನವು ನೀವೇ ; ಒಳಗೆ ನೀವು ಹೊರಗೆ ನೀವು; ನಾನೆಂಬುದಿಲ್ಲ, ನಾನೇನು ಮಾಡಿತ್ತು, ಎಲ್ಲವೂ ನಿಮ್ಮ ವಿನೋದ ; ಎನ್ನ ಸರ್ವಭೋಗವೆಲ್ಲ ನಿಮ್ಮ ಭೋಗವಯ್ಯಾ ಕರ್ತೃತ್ವ ನಿಮ್ಮದಾಗಿ, ಎನಗೆ ಕರ್ತೃತ್ವವಿಲ್ಲ-ನಿಜಗುರು ಸ್ವತಂತ್ರಸಿದ್ಧ ಲಿಂಗೇಶ್ವರಾ.

‘ಪುರುಷ’ ಎಂಬ ಪದವು ಸಾಮಾನ್ಯವಾಗಿ ಒಂದು ವ್ಯಕ್ತಿಯನ್ನು ನಿರ್ದೇಶಿಸುವುದಾದರೂ, ಅದು ಒಂದು ಲಿಂಗವನ್ನು ಸೂಚಿಸುವುದಾದರೂ ಇಲ್ಲಿ ‘ಪುರುಷ’ನೆಂದು ನಿರ್ದೇಶಿಸಲ್ಪಟ್ಟಿರುವುದು ಗಂಡೂ ಅಲ್ಲ; ಅಷ್ಟೇ ಅಲ್ಲ, ಅದು ಒಂದು ವ್ಯಕ್ತಿಯೇ ಅಲ್ಲ ; ಅದು ಏನೆಂಬುದನ್ನು ತಿಳಿಯಲು ಉಪನಿಷತ್ತುಗಳಿಗೆ ಶರಣುಹೊಡೆಯಬೇಕು. ಕೇನೋಪನಿಷತ್ತಿನಲ್ಲಿ ಹೇಳಿದೆ :

ಯದ್ ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಯನ್ಮಸಾ ನ ಮನುತೇ ಯೇನಾಹುರ್ಮನೋ ಮತಂ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಗ್^ಂಷಿ ಪಶ್ಯತಿ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಗ್^ಂ ಶ್ರುತಂ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಯತ್ ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಈ ಮಂತ್ರದ ಅರ್ಥವನ್ನು ತಿಳಿಯಲು ಅದರ ಕನ್ನಡದ ಪದ್ಯಾನುವಾದವನ್ನಿಲ್ಲಿ ಕೊಟ್ಟಿದೆ :

ಅದಪೇಳಲರಿಯದೆನೆ ವಾಕ್, ವಾಕ್‌ಗೆ ವಾಕ್ಛಕ್ತಿ ।
ಅದರಿನೆನೆ-ಅದೆಬೊಮ್ಮ ; ಜನರುಪಾಸಿಪುದಲ್ಲ ॥

ಅದು ಸಿಗದು ಮನಸಿನಿಂ ಮನನಕೆ ; ಮನದ ಮನನ ।
ಅದರಿನೆನೆ-ಅದೆಬೊಮ್ಮ ; ಜನರುಪಾಸಿಪುದಲ್ಲ ॥

ಅದು ಕಣ್ಗೆ ಕಾಣಿಸದು ; ಕಣ್ ನೋಟಮಂ ನೋಳ್ಪ ।
ಅದರಿನೆನೆ-ಅದೆಬೊಮ್ಮ ; ಜನರುಪಾಸಿಪುದಲ್ಲ ॥

ಅದು ಶ್ರೋತ್ರಕಶ್ರುತಮಾಶ್ರೋತ್ರಮೇ ಶ್ರುತಂ ।
ಅದರಿನೆನೆ-ಅದೆಬೊಮ್ಮ ; ಜನರುಪಾಸಿಪುದಲ್ಲ ॥

ಅದುಸಿರಾಡದುಸಿರಿಂ ; ಪ್ರೇರಣೆಯುಸಿರಾಟಕೆ ।
ಅದರಿನೆನೆ-ಅದೆಬೊಮ್ಮ ; ಜನರುಪಾಸಿಪುದಲ್ಲ ॥

ವಿದ್ಯುಚ್ಛಕ್ತಿಯು ಯಂತ್ರಗಳೊಳಗೆ ಪ್ರವೇಶಿಸದಿದ್ದರೆ, ಅವು ಹೇಗೆ ಚಲಿಸುವುದಿಲ್ಲವೋ ಹಾಗೆಯೇ ಪರಮಚೈತನ್ಯವು ಪ್ರಾಣಿಗಳೊಳಗೆ ಪ್ರವೇಶಿಸದಿದ್ದರೆ ಅವುಗಳ ಅಂಗಗಳು ಅವವುಗಳ ಕೆಲಸವನ್ನು ಮಾಡಲಾರವು. ಆದುದರಿಂದ ಪ್ರಾಣಿಗಳ ಅಂಗಗಳೆಂದು ನಾವು ಹೇಳುವ ಅಂಗಗಳೆಲ್ಲವೂ ಆ ಪರಮಚೈತನ್ಯದ ಅಂಗಗಳೆ. ಆದುದರಿಂದ ಆ ಪರಮಚೈತನ್ಯವನ್ನು ಸಹಸ್ರಶೀರ್ಷ, ಸಹಸ್ರಾಕ್ಷ ಎಂದು ಮೊದಲಾಗಿ ಪುರುಷಸೂಕ್ತದಲ್ಲಿ ಹೇಳಿರುವುದು ಆ ಚೈತನ್ಯವನ್ನು ಪುರುಷನೆಂದು ಕರೆದಿದ್ದರೂ ಪುರುಷಶಬ್ದವಾಚ್ಯವಾದುದು ಒಂದು ವ್ಯಕ್ತಿಸ್ವರೂಪವಲ್ಲ. ಮೂರು ಕಣ್ಣುಗಳೂ, ತ್ರಿಶೂಲಾದಿಗಳೂ

ನಾಲ್ಕು ಕೈಗಳೂ, ಪಂಚಮುಖಗಳೂ ಇರುವ ಅಥವಾ ಶಂಖ ಚಕ್ರ ಗಧಾದಿಗಳನ್ನು ಧರಿಸಿದ ಚತುರ್ಬಾಹುಗಳು ಉಳ್ಳ ಅಥವಾ ನಾಲ್ಕು ತಲೆಗಳೂ, ನಾಲ್ಕು ಕೈಗಳೂ ಉಳ್ಳ ಯಾವ ವ್ಯಕ್ತಸ್ವರೂಪವಾಗಲೀ ಜಗತ್ತನ್ನೆಲ್ಲ ವ್ಯಾಪಿಸಿ ಎಲ್ಲಕ್ಕೂ ಚೈತನ್ಯದಾಯಕವಾಗಲಾರದು. ಪುರುಷಸೂಕ್ತೋಕ್ತ ಪುರುಷ—ಎಂದರೆ ತ್ರಿಮೂರ್ತಿಗಳಿಗೂ ಕಾರಣವಾದ 'ಪರಸಚ್ಚಿದಾನಂದ ಪರಿಪೂರ್ಣ ನಿತ್ಯನಿಜನಿರತಿಶಯ ನಿರ್ವಿಕಲ್ಪವಾಗಿರ್ಪುದೊಂದು ಪರಮಾತ್ಮ.' ಎಂದು ನಿಜಗುಣಶಿವಯೋಗಿಗಳ ಮಾತಿನಲ್ಲಿ ಹೇಳಬಹುದು. "ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ" ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದಂತೆಯಾದರೂ ಹೇಳಬಹುದು. ಮೇಲೆ ಉಕ್ತವಾಗಿರುವ ಕೇನೋಪನಿಷತ್ತಿನ ಈ ಭಾಗದ ಮುನ್ನುಡಿಯಲ್ಲಿ ಶ್ರೀ ಶಂಕರಾಚಾರ್ಯರು, ಶಿಷ್ಯನ ಸಂದೇಹವೊಂದನ್ನು ಪರಿಹರಿಸಲು ಈ ಭಾಗವು ಉಕ್ತವಾಗಿದೆಯೆಂದು ಹೇಳಿರುವರು—"ಉಪಾಸ್ಯೋವಿಷ್ಣುಃ, ಈಶ್ವರಃ, ಇಂದ್ರಃ ಪ್ರಾಣೋ ವಾ ಬ್ರಹ್ಮಭವಿತುಮರ್ಹತಿ; ನತ್ವಾತ್ಮಾ" ಎಂಬುದು ಶಿಷ್ಯನ ಸಂದೇಹ. ವಿಷ್ಣು, ಈಶ್ವರ, ಇಂದ್ರ, ಪ್ರಾಣ, ಇವರನ್ನು ಕುರಿತು ಉಪಾಸನೆಯನ್ನು ಮಾಡಲು ಸಾಧ್ಯ—ಎಂದರೆ ಇವರು ಉಪಾಸಕನಿಗಿಂತ ಅನ್ಯರಾದವರು ; ಇಂಥವರಲ್ಲಿ ಯಾರಾದರೂ ಪುರುಷಸೂಕ್ತೋಕ್ತ ಬ್ರಹ್ಮನೇ ಎಂಬ ಶಿಷ್ಯನ ಸಂದೇಹವನ್ನು ಪರಿಹರಿಸಲು ಮೇಲಿನ ಕೇನೋಪನಿಷತ್ತಿನ ಭಾಗವು ಉಕ್ತವಾಗಿದೆಯೆಂದು ಶ್ರೀಶಂಕರಚಾರ್ಯರ ಅಭಿಪ್ರಾಯ. "ನೇದಂ ಬ್ರಹ್ಮ ಯದ್ 'ಇದಂ' ಇತಿ ಉಪಾಧಿಭೇದ ವಿಶಿಷ್ಟಂ ಅನಾತ್ಮ ಈಶ್ವರಾದಿ ಉಪಾಸತೇ ಧ್ಯಾಯಂತಿ" ಎಂದು 'ನೇದಂಬ್ರಹ್ಮ' ಎಂಬ ಮೇಲೆ ಹೇಳಿದ ಮಂತ್ರಗಳ ಭಾಗಕ್ಕೆ ಭಾಷ್ಯವನ್ನು ಶ್ರೀ ಶಂಕರಾಚಾರ್ಯರು ಬರೆದಿದ್ದಾರೆ. ಈಶ್ವರಾದಿಗಳು ಎಂದರೆ ಬ್ರಹ್ಮ, ವಿಷ್ಣು, ಈಶ್ವರ ಎಂಬ ಹಿಂದೆ ಹೇಳಿದ ತ್ರಿಮೂರ್ತಿಗಳೂ ಇಂದ್ರ ಮತ್ತು ಪ್ರಾಣ ಇವು ; ಉಪಾಧಿಭೇದವಿಶಿಷ್ಟರಾದ ಇವರೆಲ್ಲರನ್ನು ಜನರು ತಮಗಿಂತ ಅನ್ಯರೆಂಬ ಭಾವನೆಯಿಂದ ಪೂಜಿಸುವರು : ಇವರು ಬ್ರಹ್ಮವಲ್ಲವೆಂಬುದು ಮೇಲಿನ ಮಂತ್ರಗಳ ಅಭಿಪ್ರಾಯವೆಂಬುದನ್ನು ಶಾಂಕರಭಾಷ್ಯದಲ್ಲಿ ಹೇಳಿದೆ. ಕೈಕಾಲು ಮೊದಲಾದವುಗಳಿಂದ ವ್ಯಕ್ತವಾದ ಸ್ವರೂಪವುಳ್ಳ ಪತ್ನಿಪುತ್ರರಿಂದ ಕೂಡಿ

ಸಂಸಾರಿಗಳಾದ ತ್ರಿಮೂರ್ತಿಗಳಲ್ಲಿ ಯಾರೂ ಪುರುಷಶಬ್ದವಾಚ್ಯರಲ್ಲ. ಇವರೆಲ್ಲರಿಗೂ ಕಾರಣವಾದ ನಿರ್ವಿಶೇಷಪರಬ್ರಹ್ಮವೇ ಪುರುಷಶಬ್ದದಿಂದ ನಿರ್ದೇಶಿಸಲ್ಪಟ್ಟಿರುವುದು. ಇದನ್ನು ಶೈವರು ಪರಶಿವಬ್ರಹ್ಮವೆನ್ನಲಿ, ವೈಷ್ಣವರು ಮಹಾನಾರಾಯಣನೆನ್ನಲಿ, ಆದರೆ ಆ ಪರತತ್ತ್ವದ ಶಕ್ತಿಯು ಸೌಂದರ್ಯಲಹರಿಯಲ್ಲಿ ಹೇಳಿದಂತೆ 'ಆರಾಧ್ಯಾಂ ಹರಿಹರ ವಿರಿಂಚಾದಿಭಿರಪಿ' ಎನ್ನುವಂತಿರಬೇಕು. ಅದು ನಿರ್ಗುಣವೂ, ನಿಷ್ಕಲವೂ, ರೂಪರಹಿತವೂ ಆಗಿರಬೇಕೇ ಹೊರತು ಸಗುಣವೂ, ಸಕಲವೂ, ತ್ರಿಶೂಲ ಡಮರುಗ ಶಂಖ ಚಕ್ರಗಧಾದ್ಯಲಂಕೃತದೇಹಿಯೂ ಆಗಿರಬಾರದು. ಪುರುಷಶಬ್ದದಿಂದ ಯಾವ ವ್ಯಕ್ತಿಯೂ ನಿರ್ದೇಶಿಸಲ್ಪಟ್ಟಿಲ್ಲವೆಂದೂ, ಪರಬ್ರಹ್ಮವೇ ಪುರುಷವಾಚ್ಯವೆಂದೂ ತಿಳಿಯಬೇಕು.

ಈ ಮಂತ್ರದಲ್ಲಿ ಗಮನಿಸಬೇಕಾದ ಮೂರನೆಯ ವಿಷಯವು 'ಸಭೂಮಿಂ ವಿಶ್ವತೋ ವೃತ್ವಾ' ಎಂಬ ಭಾಗವು; ಭೂಮಿ ಎಂದರೆ ಪೃಥ್ವಿಯೊಂದೆ ಅಲ್ಲ; ಭೂಮಿ ಎಂಬ ಪದದಿಂದ ಬ್ರಹ್ಮಾಂಡವೆಲ್ಲವೂ ಸೂಚಿತವಾಗಿರುವುದು. ಪುರುಷಶಬ್ದವಾಚ್ಯವಾದ ಪರಬ್ರಹ್ಮವು ಸೃಷ್ಟಿಸಲ್ಪಟ್ಟ ಬ್ರಹ್ಮಾಂಡವೆಲ್ಲಕ್ಕೂ ಅಂತರ್ಯಾಮಿಯಾಗಿರುವುದು. 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್' ಎಂದು ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದಂತೆ ಜಗತ್ತೆಲ್ಲವನ್ನು ಪರಬ್ರಹ್ಮವು ಆವರಿಸಿರುವುದು. "ಪುರುಷ ಏವ ಇದಂ ಸರ್ವಂ" ಎಂದು ಮುಂದಿನ ಮಂತ್ರದಲ್ಲಿಯೇ ಹೇಳಿರುವುದರಿಂದ ಬ್ರಹ್ಮಾಂಡವೆಲ್ಲವೂ ಪರಬ್ರಹ್ಮದಿಂದ ಹೊರತಾದುದಲ್ಲ. ಇದೆಲ್ಲವೂ ಪರಬ್ರಹ್ಮವೇ ಆದುದರಿಂದ ಆವರಿಸಿರುವುದು ಅದೇ, ಆವರಿಸಲ್ಪಡುವುದೂ ಅದೇ. ಆದುದರಿಂದ, ಅದನ್ನು ಅದೇ ಆವರಿಸುವುದೆಂದು ಹೇಳಿರುವುದರಲ್ಲಿ ಅಭಿಪ್ರಾಯವೇನೆಂಬುದನ್ನು ಅರಿಯಬೇಕು ಸಮುದ್ರದಂತೆ ಪರಬ್ರಹ್ಮವು; ತೆರೆನೊರೆಗಳಂತೆ ಬ್ರಹ್ಮಾಂಡಗಳು; ಸಮುದ್ರದ ನೀರು ತೆರೆನೊರೆಗಳಲ್ಲಿಯೂ ಆವರಿಸಿಕೊಂಡಿರುವಂತೆ ಪರಬ್ರಹ್ಮವು ಬ್ರಹ್ಮಾಂಡಗಳನ್ನು ಆವರಿಸಿಕೊಂಡಿದೆಯೆಂದು ಭಾವ.

ಇನ್ನು ವಿಮರ್ಶಿಸಬೇಕಾದುದು 'ಅತ್ಯತಿಷ್ಠತ್ ದಶಾಂಗುಲಂ'

ಎಂಬ ಈ ಮಂತ್ರದ ಉಳಿದ ಭಾಗ. ಪುರುಷಶಬ್ದವಾಚ್ಯವಾದ ಪರಬ್ರಹ್ಮವು ವಿಶ್ವವೆಲ್ಲವನ್ನು ವ್ಯಾಪಿಸಿದೆಯಲ್ಲ–ಅದು ವಿಶ್ವವೆಲ್ಲದರಷ್ಟೇ ಪರಿಮಿತವಾದುದಲ್ಲ; ಅದನ್ನು ಮೀರಿಯೂ ಇರುವುದು. ಹಿಂದೆ ಹೇಳಿದಂತೆ 'ದಶಾಂಗುಲಂ' ಎಂಬ ಪದದಿಂದ ಹತ್ತು ಅಂಗುಲದಷ್ಟು ಮಾತ್ರವೇ ಅತಿಕ್ರಮಿಸಿ ಇರುವುದೆಂದು ತಿಳಿಯಬಾರದು; ಏಕೆಂದರೆ ಅದು ಅಪರಿಮಿತವಾದುದು. ಸಾಯಣಭಾಷ್ಯದಲ್ಲಿ ಹೇಳಿದಂತೆ "ದಶಾಂಗುಲಮಿತಿ–ಉಪಲಕ್ಷಣಂ, ಬ್ರಹ್ಮಾಂಡಾತ್ ಬಹಿರಪಿ ಸರ್ವತಃ ವ್ಯಾಪ್ಯಾವಸ್ಥಿತಃ ಇತ್ಯರ್ಥಃ"–ದಶಾಂಗುಲವೆಂದು ಉಪಲಕ್ಷಣವಾಗಿ ಹೇಳಿದೆ ಬ್ರಹ್ಮಾಂಡವೆಲ್ಲದರ ಆಚೆಯೂ ಎಲ್ಲೆಲ್ಲಿಯೂ ವ್ಯಾಪಿಸಿದೆಯೆಂದು ಅರ್ಥಮಾಡಿಕೊಳ್ಳಬೇಕು. ಮಂಗಳಾಚಾರ್ಯರ ವ್ಯಾಖ್ಯಾನದಂತೆ "ಔಪಚಾರಿಕಮಿದಂ ವಚಃ ಪರಿಮಾತುಮಶಕ್ಯತ್ವಾತ್ ಸರ್ವತೋಽಧಿಕಂ ವ್ಯಾಪ್ಯ ತಿಷ್ಠತೀತಿ ಭಾವಃ" ಎಂದರೆ ದಶಾಂಗುಲವೆಂಬುದು ಔಪಚಾರಿಕವಾದ ಮಾತು; ಅಳತೆಗೆ ಸಿಗದುದಾದುದರಿಂದ ಎಲ್ಲಕ್ಕೂ ಅಧಿಕವಾಗಿ ವ್ಯಾಪಿಸಿ ಪರಬ್ರಹ್ಮವು ಸ್ಥಾಪಿತವಾಗಿರುವುದೆಂದು ಭಾವ.

ಹೀಗೆಲ್ಲ ಹೇಳಬಹುದಾದರೂ ನವಾಂಗುಲವೆಂದೋ, ಏಕಾದಶಾಂಗುಲವೆಂದೋ ಹೇಳದೆ, ದಶಾಂಗುಲವೆಂದೇ ಹೇಳಿರುವುದರಲ್ಲಿ ಏನೋ ಉದ್ದೇಶವಿರಬೇಕೆನಿಸುವುದು. ಅಂಗುಲವೆಂಬ ಮಾತು ಮನುಷ್ಯನ ಶರೀರದ ಭಾಗದ ಅಳತೆಯನ್ನು ಸೂಚಿಸುವುದು; ಶಿರಸ್ಸು, ಮನುಷ್ಯನ ದೇಹದಲ್ಲಿ ದಶಾಂಗುಲ ಪ್ರದೇಶ. ಮಾನವದೇಹದಲ್ಲಿ ಶಿರಸ್ಸು ಇತರ ಭಾಗಗಳನ್ನು ಅತಿಕ್ರಮಿಸಿ ನಿಂದಿರುವುದಷ್ಟೆ. ಹಾಗೆಯೇ ಪರಬ್ರಹ್ಮದ ಅಧೋಭಾಗದಿಂದ ವಿಶ್ವವೆಲ್ಲವೂ ಆವರಿಸಲ್ಪಟ್ಟು, ಊರ್ಧ್ವಭಾಗವು ಅವೆಲ್ಲವನ್ನು ಅತಿಕ್ರಮಿಸಿ ನಿಂದಿರುವುದೆಂಬ ಸಂಕೇತವು 'ಅತ್ಯತಿಷ್ಠತ್ ದಶಾಂಗುಲಂ' ಎಂಬ ಪದಗಳಿಗೆ ಇರಬೇಕೆನಿಸುವುದು.

ಮಹೀಧರಭಾಷ್ಯದಲ್ಲಿ 'ನಾಭೇಃ ಸಕಾಶಾದ್ ದಶಾಂಗುಲಂ ಅತಿಕ್ರಮ್ಯ ಹೃದಿಸ್ಥಿತಃ' ಎಂದರೆ ಹೊಕ್ಕುಳಿಂದ ಹತ್ತು ಅಂಗುಲ ಪ್ರದೇಶ

ವನ್ನು ಮೀರಿ ಇರುವ ಹೃದಯದಲ್ಲಿ ಪರಮಾತ್ಮನು ಸ್ಥಿತನಾಗಿರುವನೆಂಬ ಅರ್ಥವೊಂದನ್ನೂ ಹೇಳಿದ್ದಾರೆ. ಶ್ರೀ ರಾಮಾನುಜಾಚಾರ್ಯರೂ "ನಾಭೇರೂರ್ಧ್ವಂ ದ್ವಾದಶಾಂಗುಲಮತಿಕ್ರಮ್ಯಾತಿಷ್ಠತ್ ಹೃತ್‌ಪದ್ಮೇ" ಎಂದು ಹೇಳಿರುವುದರಲ್ಲಿಯೂ ಇದೇ ಅಭಿಪ್ರಾಯವಿದೆ ಹೃದಯಪದ್ಮದಲ್ಲಿ ಪರಮಾತ್ಮನಿರುವನೆಂಬುದು ಪ್ರಸಿದ್ಧ ವಿಷಯವೆ; ಆದರೆ ಹತ್ತು ಅಂಗುಲವನ್ನು ಅಳೆಯುವುದನ್ನು ನಾಭಿಯಿಂದ ಏಕೆ ಪ್ರಾರಂಭಿಸಬೇಕು ಎನಿಸುವುದು; ಅತ್ಯತಿಷ್ಠತ್ ಪದದಲ್ಲಿ ತುದಿಗೇರಿರುವುದೆಂಬ ಭಾವನೆಯಿದೆ. ಹತ್ತು ಅಂಗುಲ ಪರಿಮಾಣವುಳ್ಳ ಶಿರಸ್ಸಿನ ತುದಿಯಲ್ಲಿ ಬ್ರಹ್ಮರಂಧ್ರವಿದೆ; ಅಲ್ಲಿ ಪರಬ್ರಹ್ಮವು ಅತ್ಯತಿಷ್ಠತ್ ಆಗಿದೆಯೆಂಬುದು, ಶಿರಸ್ಸಿನ ತುದಿ ಎಲ್ಲಕ್ಕೂ ತುದಿಯಲ್ಲಿರುವುದರಿಂದ ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಎರಡನೆಯದಾಗಿ 'ಅತ್ಯತಿಷ್ಠತ್' ಪದದಲ್ಲಿ, ಪರಬ್ರಹ್ಮವು ಎಲ್ಲಕ್ಕೂ ಮೇಲಿದ್ದು ಅಧ್ಯಕ್ಷನಂತೆ ಎಲ್ಲವನ್ನು ಆಳುವುದೆಂಬ ಭಾವನೆಯಿದೆ. ಶಿರಸ್ಸಿನ ತುದಿಯಲ್ಲಿರುವ ಮೆದುಳು ಅದರ ಕೆಳಗಿರುವ ಶರೀರದ ಎಲ್ಲ ಭಾಗವನ್ನು ಆಳುವಂತೆ ಪರಬ್ರಹ್ಮವು ಎಲ್ಲಕ್ಕೂ ಮೇಲೆ ಬ್ರಹ್ಮರಂಧ್ರದಲ್ಲಿದ್ದು ಎಲ್ಲವನ್ನುಆಳುವುದೆಂಬ ಭಾವನೆಯು ಅಭಿಪ್ರೇತವೆಂದು ತೋರುತ್ತದೆ. ಮೂರನೆಯದಾಗಿ 'ಪಿಂಡಬ್ರಹ್ಮಾಂಡಯೋರೈಕ್ಯಂ' ಎಂಬ ಸಿದ್ಧಾಂತದಂತೆ ಬ್ರಹ್ಮಾಂಡದಲ್ಲಿರುವುದೆಲ್ಲವೂ ಪಿಂಡಾಂಡದಲ್ಲಿದೆಯೆಂಬ ಭಾವನೆಯು ಇದೆಯಷ್ಟೆ. ಪುರುಷಸೂಕ್ತದಲ್ಲಿಯೇ ಯಾವಯಾವುದು ಪುರುಷನ ಯಾವಯಾವ ಭಾಗದಿಂದ ಹೊರಹೊಮ್ಮಿತು. ಎಂಬುದನ್ನು ಹೇಳಿದೆ. ಉದಾಹರಣೆಗಾಗಿ "ಪದ್ಭ್ಯಾಂ ಭೂಮಿಃ" ಎಂದು ಹೇಳಿರುವಂತೆ "ಶೀರ್ಷ್ಣೋ ದ್ಯೌಃ" ಎಂದು ಹೇಳಿದೆ; ಹೀಗೆ ಯಾವಯಾವ ಅಂಗದಿಂದ ಯಾವುಯಾವುದು ಉತ್ಪತ್ತಿಯಾಯಿತೆಂದು ಹೇಳುವುದರಲ್ಲಿ ಒಂದು ವಿಶಿಷ್ಟವಾದ ಕ್ರಮವು ಉಕ್ತವಾಗಿದೆಯೆನ್ನಬೇಕು. ಪಾದಾದಿ ಸಾಮಾನ್ಯವಾದ ಅಂಗಗಳು ಉತ್ಪನ್ನವಾಗುವ ಭಾಗಕ್ಕಿಂತ ಊರ್ಧ್ವಭಾಗದಲ್ಲಿ ದ್ಯುಲೋಕವು ಹೊರಹೊಮ್ಮಿರುವುದನ್ನು ಹೇಳಿದೆ. ಆದುದರಿಂದ ಶಿರಸ್ಸಿನ ಅಗ್ರಭಾಗದಲ್ಲಿ ಪರಮಾತ್ಮನು ಅವಸ್ಥಿತನಾಗಿರುವನೆಂಬುದು ಹೆಚ್ಚು ಸೂಕ್ತವಾದುದು. ನಾಲ್ಕನೆಯದಾಗಿ, ಯಾವ ಸ್ಥಾನದಲ್ಲಿ ಪರಬ್ರಹ್ಮವು ಯೋಗದಲ್ಲಿ ಅಭಿವ್ಯಕ್ತವಾಗುವುದೆಂಬುದು ಈ ವಿಷಯದ ಮೇಲೆ ಬೆಳಕನ್ನು ಬೀರುವುದು.

ಈ ವಿಷಯವಾಗಿ ಹೆಚ್ಚು ವಿವರಗಳನ್ನು ತಿಳಿಯಬೇಕೆನ್ನುವವರು ನನ್ನ "ಕೇನೋಪನಿಷತ್ ತಾತ್ಪರ್ಯನಿರ್ಣಯ" ಗ್ರಂಥದಲ್ಲಿ ಹೇಳಿರುವುದನ್ನು ಓದಬಹುದು. ಅದರ ಸ್ವಲ್ಪಭಾಗವನ್ನಿಲ್ಲಿ ಕೊಟ್ಟರೆ ಸಾಕೆನಿಸುವುದು :

"ಲಿಂಗಮೂಲದಲ್ಲಿ ಸ್ವಾಧಿಷ್ಠಾನಚಕ್ರವೂ, ನಾಭಿಮೂಲದಲ್ಲಿ ಮಣಿಪೂರಚಕ್ರವೂ, ಹೃದಯದೇಶದಲ್ಲಿ ಅನಾಹತಚಕ್ರವೂ, ತಾಲುಮೂಲದಲ್ಲಿ ವಿಶುದ್ಧಿಚಕ್ರವೂ, ಹುಬ್ಬುಗಳ ಮಧ್ಯೆ ಆಜ್ಞಾಚಕ್ರವೂ ಇವೆ. ಇನ್ನುಮುಂದೆ ಬ್ರಹ್ಮಸ್ಥಾನವಿದೆ. ಮೂಲಾಧಾರದಲ್ಲಿ ಪೃಥ್ವಿಯ ತತ್ತ್ವವೂ, ಸ್ವಾಧಿಷ್ಠಾನದಲ್ಲಿ ಜಲತತ್ತ್ವವೂ, ಮಣಿಪೂರದಲ್ಲಿ ಅಗ್ನಿತತ್ತ್ವವೂ, ಅನಾಹತಚಕ್ರದಲ್ಲಿ ವಾಯುತತ್ತ್ವವೂ, ವಿಶುದ್ಧಿತತ್ತ್ವದಲ್ಲಿ ಆಕಾಶತತ್ತ್ವವೂ, ಆಜ್ಞಾಚಕ್ರದಲ್ಲಿ ಮನಸ್ತತ್ತ್ವವೂ ಸಂಬಂಧಿಸಿಕೊಂಡಿವೆ. ಪ್ರಾಣಾಯಾಮದಲ್ಲಿ "ಹರಿವ ಮನವನೊಂದು ಹುರಿಯುಮಾಡಿ, ಮನವಸ್ಥಿರಗೊಳಿಸಿ"ದಾಗ ಮೂಲಾಧಾರದಲ್ಲಿರುವ ಕಂದರ್ಪವಾಯುವು, ಕುಂಡಲಿನಿಯ ಸುತ್ತಲಿರುವ ಅಗ್ನಿಯನ್ನು ಪ್ರಜ್ವಲಿಸಲು, ಅದು ಎಚ್ಚರಗೊಂಡು ಸುಷುಮ್ನನಾಡಿಯ ಬಾಯನ್ನು ಮುಚ್ಚಿರುವ ಎಡೆಯನ್ನು ಓಸರಿಸಿ, ಜೀವಾತ್ಮನೊಡನೆ ಅದರೊಳಗೆ ಪ್ರವೇಶಮಾಡುವುದು. ಕುಂಡಲಿನಿಯು ಮೂಲಾಧಾರದಿಂದ ಆಜ್ಞಾಚಕ್ರದವರೆಗೆ ಏರಿದಾಗ, ಪೃಥ್ವಿತತ್ತ್ವವು ಜಲತತ್ತ್ವದಲ್ಲಿಯೂ, ಜಲವು ಅಗ್ನಿತತ್ತ್ವದಲ್ಲಿಯೂ, ಅಗ್ನಿತತ್ತ್ವವು ವಾಯುತತ್ತ್ವದಲ್ಲಿಯೂ, ವಾಯುತತ್ತ್ವವು ಆಕಾಶತತ್ತ್ವದಲ್ಲಿಯೂ, ಆಕಾಶತತ್ತ್ವವು ಮನಸ್ತತ್ತ್ವದಲ್ಲಿಯೂ ಮನಸ್ತತ್ತ್ವವೂ ಕುಂಡಲಿನಿಯಲ್ಲಿಯೂ ಲಯವಾಗುವುವು.... ಕೈವಲ್ಯಕಲ್ಪವಲ್ಲರಿಯ ಯೋಗಮಾರ್ಗದ ವರ್ಣನೆಯಿದು ಉಲ್ಲೇಖಾರ್ಹವಾಗಿದೆ :

ಸಾರಸಾರಿಯ ನೊತ್ತಿ ಬಂಧಿಸಿ । ಹಿಮ್ಮೆಟ್ಟನಿಂದ ।
ಸಾರಸಾಪ್ತನ ಕೂಡೆ ಹೊಂದಿಸಿ । ಮುಂದಕ್ಕೆ ನಡೆದು
ಮಾರುತಪ್ರಿಯನಲ್ಲಿ ಸಂಧಿಸಿ । ಸೌಷುಮ್ನರಂಧ್ರದಿ ತೂರಿ
ಧರೆಗಡಿಯೂರಿ । ಸಲಿಲವಹಾರಿ । ದಹನನಿಗೇರಿ
ಮರುತನಮೀರಿ । ಗಗನವತೂರಿ । ಬ್ರಹ್ಮದಿ ಸೇರಿ ।

ಅಮೃತವಪೀರಿ । ಸುಖಿಸುವ ಯೋಗಪಾರ್ಗ
ನಿರ್ಯೋಗದೊಳಿಹ । ಯೋಗಿಗೆ ನಮಿಸುವೆನು ॥

ಇದರಲ್ಲಿ, ಧರೆ, ಸಲಿಲ, ದಹನ, ಮರುತ, ಗಗನ ಎಂಬವು ಆರು ಚಕ್ರಗಳಲ್ಲಿರುವ ಧರೆ ಮೊದಲಾದ ಪಂಚಭೂತಗಳು ; ಸೌಷುಮ್ನರಂಧ್ರದಿ ಕುಂಡಲಿನಿಯೊಡನೆ ಜೀವಾತ್ಮನು ತೂರಿದ ಅನಂತರ, ಇವನ್ನು ಅತಿಕ್ರಮಿಸಿ, ಸಹಸ್ರಾರಪದ್ಮದಿಂದ ಅಮೃತಧಾರೆಯನ್ನು ಪೀರಲು, ಬ್ರಹ್ಮಾನಂದದಲ್ಲಿ ಸುಖಿಸುವ ಯೋಗಿಯು, ಯೋಗ ಎಂದರೆ ಸವಿಕಲ್ಪಸಮಾಧಿಯಿಂದ ಮುಂದು ವರಿದು, ನಿರ್ಯೋಗ ಎಂದರೆ ನಿರ್ವಿಕಲ್ಪಸಮಾಧಿಯಲ್ಲಿ ಇರುವುದನ್ನು ಇಲ್ಲಿ ಸೂಚಿಸಿದೆ. ಸಾರಸಾರಿ ಎಂದರೆ ಚಂದ್ರ, ಸಾರಸಾಪ್ತನೆಂದರೆ ಸೂರ್ಯ, ಮಾರುತಪ್ರಿಯನೆಂದರೆ ಅಗ್ನಿ ; ಮೂಲಾಧಾರ ಸ್ವಾಧಿಷ್ಠಾನಚಕ್ರಗಳು ಅಗ್ನಿ ಮಂಡಲದಲ್ಲಿವೆ ; ಮಣಿಪೂರ ಅನಾಹತಚಕ್ರಗಳು ಸೂರ್ಯಮಂಡದಲ್ಲಿವೆ; ವಿಶುದ್ಧಿ ಆಜ್ಞಾಚಕ್ರಗಳು ಚಂದ್ರಮಂಡಲದಲ್ಲಿವೆ. ಸಾರಸಾರಿ, ಸಾರ ಸಾಪ್ತ, ಮಾರುತಪ್ರಿಯ ಎಂದು ಹೇಳಿರುವುದರಲ್ಲಿ ಚಂದ್ರಮಂಡಲ, ಸೂರ್ಯಮಂಡಲ ಮತ್ತು ಅಗ್ನಿಮಂಡಲಗಳು ವಿವಕ್ಷಿತವಾಗಿವೆ."

ತೈತ್ತಿರಿಯೋಪನಿಷತ್ತಿನಲ್ಲಿ ಹೇಳಿದಂತೆ—"ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ" ಎಂದರೆ ಆತ್ಮನಿಂದ ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲ ದಿಂದ ಪೃಥಿವಿತತ್ತ್ವವೂ, ಹುಟ್ಟುವುದು ಸೃಷ್ಟಿಯ ಕ್ರಮ. "ಯದ್ ದೃಷ್ಟಂ ತನ್ನಷ್ಟಂ" ಎಂಬ ಆಧಾರದಂತೆ ಪೃಥ್ವಿಯನ್ನು ಜಲತತ್ತ್ವ ದಲ್ಲಿಯೂ, ಜಲತತ್ತ್ವವನ್ನು ಅಗ್ನಿತತ್ತ್ವದಲ್ಲಿಯೂ, ಅಗ್ನಿತತ್ತ್ವವನ್ನು ವಾಯುತತ್ತ್ವದಲ್ಲಿಯೂ, ವಾಯುತತ್ತ್ವವನ್ನು ಆಕಾಶತತ್ತ್ವದಲ್ಲಿಯೂ, ಆಕಾಶತತ್ತ್ವವನ್ನು ಆತ್ಮನಲ್ಲಿಯೂ ಮೇಲೆ ಹೇಳಿದಂತೆ ಧ್ಯಾನಯೋಗದಲ್ಲಿ ಲಯಗೊಳಿಸಿದರೆ ಆತ್ಮದರ್ಶನವಾಗುವುದು. ಪೃಥಿವಿಯಾದಿತತ್ತ್ವಗಳು ಲಿಂಗಮೂಲಾದಿಸ್ಥಾನಗಳಲ್ಲಿರುವುದರಿಂದ ಇವುಗಳೆಲ್ಲದರ ಮೇಲಿರುವ ಬ್ರಹ್ಮ ರಂಧ್ರದಲ್ಲಿ ಸಹಸ್ರಾರಕಮಲದಲ್ಲಿ ಬ್ರಹ್ಮಾನುದರ್ಶನವಾಗುವುದು. ಆದುದ

ರಿಂದ ದಶಾಂಗುಲಪ್ರಾದೇಶವೆಂದರೆ ಶಿರಸ್ಸು ; ಅದರ ಊರ್ಧ್ವಭಾಗದಲ್ಲಿಯೇ ಪುರುಷಶಬ್ದವಾಚ್ಯವಾದ ಪರಬ್ರಹ್ಮವು ಅತ್ಯತಿಷ್ಠವಾಗಿರುವುದು—ಎಂದು ಸ್ಪಷ್ಟವಾಗುವುದು.

ಅಳತೆಗೆ ಸಿಗದ ಪರಮಾತ್ಮನು ಹತ್ತು ಅಂಗುಲ ಪ್ರದೇಶದಲ್ಲಿ "ಅತ್ಯತಿಷ್ಠತ್" ಹೇಗೆ ಆಗುವನು ಎಂಬ ವಿಷಯದಲ್ಲಿ ಬ್ರಹ್ಮಸೂತ್ರಕಾಲದಲ್ಲಿಯೇ ಭಿನ್ನಾಭಿಪ್ರಾಯವಿದ್ದಿತು. ಬ್ರಹ್ಮಸೂತ್ರದಲ್ಲಿ (೧-೨-೨೯) "ಅಭಿವ್ಯಕ್ತೇರಿತ್ಯಾಶ್ಮರಥ್ಯಃ" ಎಂಬುದರ ಶಾಂಕರಭಾಷ್ಯದಲ್ಲಿ "ಅತಿಮಾತ್ರಸ್ಯಾಪಿ ಪರಮೇಶ್ವರಸ್ಯ ಪ್ರಾದೇಶಮಾತ್ರತ್ವಂ ಅಭಿವ್ಯಕ್ತಿನಿಮಿತ್ತಂ ಸ್ಯಾತ್, ಅಭಿವ್ಯಜ್ಯತೇಕಿಲಪ್ರದೇಶಮಾತ್ರಪರಿಮಾಣಃ ಪರಮೇಶ್ವರಃ ಉಪಾಸಕಾನಾಂ ಕೃತೇ" ಎಂದು ಹೇಳಿದೆ. ಅಳತೆಗೆ ಸಿಗದವನಾದರೂ ಪರಮೇಶ್ವರನು ಉಪಾಸಕರಿಗಾಗಿ (ಹೃದಯಾದಿಗಳಲ್ಲಿ) ಒಂದು ಗೇಣಿನ ಪ್ರಮಾಣದವನಾಗಿ ಅಭಿವ್ಯಕ್ತನಾಗುತ್ತಾನಂತೆ. ಈ ದೃಷ್ಟಿಯಿಂದ ಪರಮಾತ್ಮನು ಪ್ರಾದೇಶಮಾತ್ರನು ಎಂಬುದು ಆಶ್ಮರಥ್ಯರ ಅಭಿಪ್ರಾಯ. "ಅನುಸ್ಮೃತೇರ್ಬಾದರಿಃ" ಎಂಬ ಸೂತ್ರವು (೧-೨-೩೦) ಬಾದರಿಯ ಅಭಿಪ್ರಾಯವನ್ನು ಹೇಳುತ್ತದೆ. "ಪ್ರಾದೇಶಮಾತ್ರ ಹೃದಯ ಪ್ರತಿಷ್ಠೇನ ವಾ ಅಯಂ ಮನಸಾ ಅನುಸ್ಮರ್ಯತೇ ತೇನಪ್ರಾದೇಶ ಮಾತ್ರಃ ಇತ್ಯುಚ್ಯತೇ ; ಯಥಾ ಪ್ರಸ್ಥಮಿತಾ ಯವಾಃ ಪ್ರಸ್ಥಾ ಇತಿ ಉಚ್ಯಂತೇ ತದ್ವತ್" ಎಂಬುದು ಇದರ ಶಾಂಕರಭಾಷ್ಯ—ಈ ಹೃದಯವು ಪ್ರಾದೇಶಮಾತ್ರವಾದುದು ; ಅದರಲ್ಲಿರುವ ಮನಸ್ಸಿನಿಂದ ಪರಮಾತ್ಮನನ್ನು ಸ್ಮರಣೆ ಮಾಡುತ್ತಾರೆ. ಒಂದು ಬಳ್ಳ ಅಳತೆಯ ಜವೆ ಗೋಧಿಯನ್ನು ತಂದವನು ಒಂದು ಬಳ್ಳ ತಂದೆ ಎನ್ನುವಂತೆ, ಸ್ಮರಣೆಮಾಡುವ ಮನಸ್ಸಿರುವ ಪ್ರಾದೇಶಮಾತ್ರ ಹೃದಯದ ದೃಷ್ಟಿಯಿಂದ ಪರಮಾತ್ಮನು ಪ್ರಾದೇಶಮಾತ್ರನು ಎನ್ನುವರೆಂಬುದು ಬಾದರಿಯ ಮತ. ಇನ್ನು ೧-೨-೩೧ನೆಯ ಸೂತ್ರದಲ್ಲಿ "ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ" ಎಂಬ ಸೂತ್ರದಲ್ಲಿ ಜೈಮಿನಿಯ ಅಭಿಪ್ರಾಯವನ್ನು ಹೇಳಿದೆ. ದ್ಯುಲೋಕಾದಿಗಳಿಂದ ಪೃಥ್ವಿಯವರೆಗೆ ಇರುವ ತ್ರೈಲೋಕ್ಯಾತ್ಮನಾದ ವೈಶ್ವಾನರನ ಅವಯವಗಳನ್ನು ಅಧ್ಯಾತ್ಮವಾದ ಮೂರ್ಧಾದಿಚುಬುಕಾಂತ ಪ್ರಾದೇಶಮಾತ್ರದಲ್ಲಿ ಸಂಪಾದನೆ

ಮಾಡಿ ಪರಮೇಶ್ವರನಿಗೆ ಪ್ರಾದೇಶಸಂಪತ್ತಿಯನ್ನು ವಾಜಸನೇಯಿ ಬ್ರಾಹ್ಮಣವು ತಿಳಿಸುತ್ತದೆ. ಆದುದರಿಂದ ಪರಮೇಶ್ವರನು ಪ್ರಾದೇಶ ಮಾತ್ರ ಎಂದು ಹೇಳಬಹುದೆಂಬುದು ಜೈಮಿನಿಯ ಅಭಿಪ್ರಾಯ. "ಅಮ ನಂತಿ ಚೈನಮಸ್ಮಿನ್" ಎಂಬ ಈವಿಷಯದ ಕೊನೆಯ ಸೂತ್ರದಲ್ಲಿ ಮೂರ್ಧ ಚುಬಕಗಳ ಮಧ್ಯೆ ಪರಮೇಶ್ವರನನ್ನು ಜಾಬಾಲಶಾಖೆಯವರು ಉಪಾಸನೆ ಮಾಡುತ್ತಾರೆಂದು ಹೇಳಿದೆ. ಒಟ್ಟಿನಲ್ಲಿ ಅವ್ಯಕ್ತವಾದುದು ಧ್ಯಾನಕ್ಕಾಗಿ ವ್ಯಕ್ತರೂಪದಲ್ಲಿ ಹೇಳಲ್ಪಟ್ಟಿದೆಯೆಂದು ಅಭಿಪ್ರಾಯ.

"ಸಹಸ್ರಶೀರ್ಷಾ" ಎಂದು ಪ್ರಾರಂಭವಾಗುವ ಈ ಮಂತ್ರವು ಉಪನಿ ಷತ್ತು, ಭಗವದ್ಗೀತೆ, ವಚನಕಾರರ ಮೇಲೆ ಪ್ರಭಾವವನ್ನು ಬೀರಿದೆ.

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಹಸ್ತ ಉತ ವಿಶ್ವತಸ್ಪಾತ್ ।
ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾ ಭೂಮೀ ಜನಯನ್ ದೇವ ಏಕಃ ॥

ಶ್ವೇತಾಶ್ವತರ ಮಂತ್ರವಿದು ಪುರುಷಸೂಕ್ತದ ಅಭಿಪ್ರಾಯವನ್ನೇ ಹೇಳು ತ್ತದೆ.

ಸರ್ವತಃ ಪಾಣಿಪಾದಂ ತತ್ ಸರ್ವತೋಕ್ಷಿ ಶಿರೋಮುಖಂ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥

ಎಂದು ಗೀತೆಯಲ್ಲಿ ಹೇಳಿರುವುದಾದರೂ ಪುರುಷಸೂಕ್ತದ ಮೊದಲನೆಯ ಮಂತ್ರದಲ್ಲಿ ಹೇಳಿದುದೇ ಆಗಿದೆ. ವಚನವಾಙ್ಮಯದಲ್ಲಿಯೂ ಈ ಅಭಿಪ್ರಾ ಯವು ಕಂಡುಬರುವುದು :

ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ ದೇವಾ, ನಿಷ್ಕಲ ನೀನೇ ಕಂಡಯ್ಯಾ ; ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ ವಿಶ್ವತೋಬಾಹು ನೀನೇ ದೇವಾ, ಕೂಡಲಸಂಗಮದೇವಾ.

ಈ ಮಂತ್ರದ ವಿಸ್ತಾರವಾದ ವಿವೇಚನೆಯು ಮುಂದಿನ ಮೂರು-ನಾಲ್ಕು ಮಂತ್ರಗಳಿಗೂ ಸಹ ಉಪೋದ್ಘಾತರೂಪವಾಗಿದುವುದು.

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥*

ಪ್ರತಿಪದಾರ್ಥ—ಇದಂಸರ್ವಂ-(ನಮ್ಮ ಕಣ್ಣೆದುರಿಗಿರುವ) ಈ ಜಗತ್ತೆಲ್ಲವೂ, ಯತ್ ಭೂತಂ-ಹಿಂದೆ ಯಾವುದು ಇತ್ತೋ ಅದೂ, ಚ-ಮತ್ತು, ಯತ್ ಭವ್ಯಂ-ಮುಂದೆ ಯಾವುದಾಗುವುದೊ ಅದೂ, ಪುರುಷ ಏವ-ಪರಮಾತ್ಮನೇ ಆಗಿದ್ದಾನೆ. ಉತ-ಮತ್ತು, ಅಮೃತಸ್ಯ ಈಶಾನಃ-ಮುಕ್ತಿಗೆ ಒಡೆಯನು ಆಗಿದ್ದಾನೆ. ಯತ್-ಯಾವ ಕಾರಣದಿಂದ ಜಗದ್ರಕ್ಷನಾಗಿರುವನೋ ಆ ಕಾರಣದಿಂದ, ಅನ್ನೇನ-ಪ್ರಾಣಿಗಳಿಗೆ ಭೋಗ್ಯರೂಪವಾದ ಅನ್ನದ ನಿಮಿತ್ತವಾಗಿ, ಅತಿರೋಹತಿ-ತನ್ನ ಕಾರಣರೂಪವನ್ನು ಅತಿಕ್ರಮಿಸಿ, ಭೋಗ್ಯರೂಪವಾದ ಜಗತ್ತಾಗಿ ಪರಿಣಮಿಸುತ್ತಾನೆ.

ಪದ್ಯಾನುವಾದ—

ಇಂದಿನದು ಪುರುಷನೇ, ಹಿಂದಿನದು ಪುರುಷನೇ ।
ಮುಂದಿನದು ಪುರುಷನೇ ಸರ್ವಮುಂ ಪುರುಷನೇ ।
ಕುಂದಿಲ್ಲದಮರತ್ವದೀಶ್ವರನು ಪುರುಷನೇ ।
ಪೊಂದಿ ತಳೆವನುಭೋಗ್ಯರೂಪಮುಂ ಪುರುಷನೇ ॥

---

ಸಾಯಣಭಾಷ್ಯಾಧಾರ —

ಇದಂ ವರ್ತಮಾನಂ ಜಗತ್ಸರ್ವಂ ಪುರುಷ ಏವ ; ಭೂತಂ—ಅತೀತಂ ಜಗತ್, ಭವ್ಯಂ—ಭವಿಷ್ಯಜ್ಜಗತ್ ತದಪಿ ಪುರುಷ ಏವ ; ಯದನ್ನೇನಾತಿರೋಹತಿ, ಯತ್—ಯಸ್ಮಾತ್ ಕಾರಣಾತ್, ಅನ್ನೇನ—ಪ್ರಾಣಿನಾಂ ಭೋಗ್ಯೇನ ಅನ್ನೇನ ನಿಮಿತ್ತಭೂತೇನ, ಅತಿರೋಹತಿ—ಸ್ವಕೀಯಾಂ ಕಾರಣಾವಸ್ಥಾಂ ಅತಿಕ್ರಮ್ಯ ಪರಿದೃಶ್ಯಮಾನಾಂ ಜಗದವಸ್ಥಾಂ ಪ್ರಾಪ್ನೋತಿ.

ಮಹೀಧರಭಾಷ್ಯ—

ಅಮೃತಸ್ಯ—ಅಮರಣ ಧರ್ಮಸ್ಯ ಈಶಾನಃ ; ಮುಕ್ತೇರೀಶಃ.

ಸರಳಾನುವಾದ—ತ್ರಿಕಾಲದಲ್ಲಿರುವ ಜಗತ್ತೆಲ್ಲವೂ ಈಶ್ವರನೆ. ಮೋಕ್ಷದಾಯಕನೂ ಈಶ್ವರನೆ. ಸೃಷ್ಟಿಸಲ್ಪಟ್ಟ ಭೋಕ್ತೃಗಳ ನಿಮಿತ್ತವಾಗಿ, ಅವನು ತನ್ನ ಕಾರಣರೂಪವನ್ನು ಅತಿಕ್ರಮಿಸಿ ಭೋಗ್ಯರೂಪವಾಗಿ ಪರಿಣಮಿಸುವನು.

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥*

ಪ್ರತಿಪದಾರ್ಥ-ಏತಾವಾನ್-ಹಿಂದೆ ಹೇಳಿದ ಜಗತ್ತೆಲ್ಲವೂ, ಅಸ್ಯ-ಆ ಪರಮಾತ್ಮನ, ಮಹಿಮಾ-ಸಾಮರ್ಥ್ಯವಿಶೇಷವೇ ಆಗಿದೆ. ಚ-ಮತ್ತು, ಪುರುಷಃ-ಪರಮಾತ್ಮನು, ಅತಃ-ಆ ಜಗತ್ತಿಗಿಂತಲೂ, ಜ್ಯಾಯಾನ್—ಅಧಿಕನು, ವಿಶ್ವಭೂತಾನಿ-ಭೂತಗಳೆಲ್ಲವೂ, ಅಸ್ಯ-ಅವನ, ಪಾದಃ-ಕಾಲುಭಾಗ, ಅಸ್ಯ-ಅವನ, ತ್ರಿಪಾತ್-ಮುಕ್ಕಾಲುಭಾಗ, ದಿವಿ-ಪ್ರಕಾಶದಲ್ಲಿ, ಅಮೃತಂ-ವಿಕಾರವನ್ನು ಹೊಂದದೇ ಇರುತ್ತದೆ

ಪದ್ಯಾನುವಾದ—

ಇದು ಎಲ್ಲಮುಂ ಪರಮಪುರುಷನಾ ಮಹಿಮೆಯೇ ।
ಇದು ಎಲ್ಲಕುಂ ಪರಮಪುರುಷನುರೆಯಧಿಕನೇ ।
ಇದು ಎಲ್ಲ ಭೂತಮುಂ ಪರಮನಚತುರ್ಥಾಂಶ ।
ಸದಮಳಮೃತಂ ದಿವಿಯೊಳುಳಿದ ಮುಪ್ಪಾಗಂಶ ॥

ಸರಳಾನುವಾದ—ಹಿಂದೆ ಇದ್ದುದೂ, ಇಂದು ಇರುವುದೂ, ಮುಂದೆ ಆಗುವುದೂ ಆದ ಚರಾಚರಾತ್ಮಕಪ್ರಪಂಚವೆಲ್ಲವೂ ಆ ಪರಮಾತ್ಮನ ಸಾಮ

---

ಸಾಯಣಭಾಷ್ಯಾಧಾರ—

ಅತೀತಾನಾಗತ ವರ್ತಮಾನರೂಪಂ ಜಗದ್ಯಾವದಸ್ತಿ ಏತಾವಾನ್ ಸರ್ವೋಽಪಿ ಅಸ್ಯ ಪುರುಷಸ್ಯ ಮಹಿಮಾ ಸ್ವಕೀಯಸಾಮರ್ಥ್ಯವಿಶೇಷಃ; ಪಾದಃ—ಚತುರ್ಥೋಽಂಶಃ ; ಅಮೃತಂ-ವಿನಾಶರಹಿತಂ ದಿವಿ—ದ್ಯೋತಮಾನಾತ್ಮಕೇ ಸ್ವಪ್ರಕಾಶಸ್ವರೂಪೇ ವ್ಯವತಿಷ್ಠತ ಇತಿ ಶೇಷಃ.

ಸಾಮರ್ಥ್ಯವಿಶೇಷದಿಂದ ಇವನ ಕಿಂಚಿದಂಶದ ಪರಿಣಾಮದಿಂದ ಆಗಿದೆ. ಇನ್ನುಳಿದ ಬಹ್ವಂಶವೂ ಹಾಗೆ ಪರಿಣಮಿಸದೆ ಸ್ವಸ್ವರೂಪವಾದ ಪ್ರಕಾಶಮಾನವಾಗಿಯೇ ಉಳಿದಿದೆ—ಎಂದು ಹೇಳಿದೆ.

ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ ।
ತತೋ ವಿಷ್ವಙ್ವ್ಯಕ್ರಾಮತ್ ಸಾಶನಾನಶನೇ ಅಭಿ* ॥ ೪ ॥

ಪ್ರತಿಪದಾರ್ಥ ತ್ರಿಪಾತ್ ಪುರುಷಃ-ಸ್ವಪ್ರಕಾಶಸ್ವರೂಪದಲ್ಲಿಯೇ ಇರುವ ಪುರುಷನ ಮುಪ್ಪಾಗಂಶವು, ಊರ್ಧ್ವ ಉದೈತ್-ಉತ್ಕೃಷ್ಟವಾದ ದಿವ್ಯಲೋಕದಲ್ಲಿ ಸ್ಥಾಪಿತನಾಗಿದೆ. ಅಸ್ಯ–ಇವನ, ಪಾದಃ–ಕಾಲಂಶವು, ಇಹ–ಸಂಸಾರರೂಪವಾದ ಈ ಲೋಕದಲ್ಲಿ, ಪುನಃ–ಅಭವತ್-ಮತ್ತೆ ಮತ್ತೆ ಆವಿರ್ಭವಿಸುತ್ತದೆ. ತತಃ-ಹೀಗಾದಮೇಲೆ, ಸಾಶನಾನಶನೇ, ಅಭಿ-ಹಸಿವುಳ್ಳ ಪ್ರಾಣಿರೂಪದಲ್ಲಿಯೂ, ಹಸಿವಿಲ್ಲದ ಅಚೇತನರೂಪದಲ್ಲಿಯೂ, ವಿಷ್ವಙ್-ನಾನಾರೂಪದಲ್ಲಿ, ವ್ಯಕ್ರಾಮತ್-ವ್ಯಾಪಿಸಿದನು.

ಪದ್ಯಾನುವಾದ—

ಪುರುಷನೊಳ್ ಮುಪ್ಪಾಗ ಊರ್ಧ್ವಲೋಕದೊಳಿಹುದು ।
ತಿರುತಿರುಗಿ ಕಾಲಂಶ ಇಹದೊಳಗೆ ಬರುತಿಹುದು ।
ಧರಿಸುತ್ತೆ ಭೋಕ್ತೃಭೋಗ್ಯಾದಿರೂಪದಿಂದದು ।
ತರತರದ ರೂಪದಲಿ ಜಗವನಾಕ್ರಮಿಸಿಹುದು ॥

ಸರಳಾನುವಾದ—ಪರಮಪುರುಷನ ಮುಪ್ಪಾಗಂಶವು ಇಹಲೋಕಕ್ಕೆ ಇಳಿಯದೆ ಸ್ವಸ್ವರೂಪಸ್ಥಿತಿಯಲ್ಲಿರುವುದು. ಉಳಿದ ಕಾಲಂಶವು ಚೇತನಾ

---

ಸಾಯಣಭಾಷ್ಯಾಧಾರ—

ತ್ರಿಪಾತ್ ಪುರುಷಃ ಸಂಸಾರರಹಿತಃ ಬ್ರಹ್ಮಸ್ವರೂಪಃ ; ಊರ್ಧ್ವ ಉದೈತ್–ಉತ್ಕರ್ಷೇಣ ಸ್ಥಿತವಾನ್ ಪಾದಃ–ಲೇಶಃ ; ಇಹ ಮಾಯಾಯಾಂ ಪುನರಭವತ್–ಸೃಷ್ಟಿಸಂಹಾರಾಭ್ಯಾಂ ಪುನಃಪುನಃ ಆಗಚ್ಛತಿ ; ಸಾಶನಂ–ಚೇತನಂ ಪ್ರಾಣಿಜಾತಂ, ಅನಾಶನಂ–ತದ್ರಹಿತಂ ಅಚೇತನಂ, ಗಿರಿನದ್ಯಾದಿಕಂ.

ಚೇತನರೂಪದಲ್ಲಿ ಇಹಲೋಕದಲ್ಲಿ ಮತ್ತೆಮತ್ತೆ ಆವಿರ್ಭವಿಸುತ್ತ ಈ ಲೋಕವನ್ನು ವ್ಯಾಪಿಸುವುದು.

**ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪೂರುಷಃ ।**
**ಸಜಾತೋ ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ* ॥ ೫ ॥**

ಪ್ರತಿಪದಾರ್ಥ—ತಸ್ಮಾತ್-ಆ ಪರಮಾತ್ಮನಿಂದ, ವಿರಾಟ್-ವಿವಿಧವಾಗಿ ರಾರಾಜಿಸುವ ಬ್ರಹ್ಮಾಂಡದೇಹವು, ಅಜಾಯತ-ಉತ್ಪನ್ನವಾಯಿತು. ವಿರಾಜಃ ಅಧಿಪುರುಷಃ-ಆ ಬ್ರಹ್ಮಾಂಡ ದೇಹವನ್ನೇ ಅಧಿಕರಣವನ್ನಾಗಿಮಾಡಿ ಆ ದೇಹದ ಅಭಿಮಾನಿಯಾದಪುರುಷನು ಉತ್ಪನ್ನನಾದನು. ಸಃ ಜಾತಃ-ಹಾಗೆ ಹುಟ್ಟಿದ ಪುರುಷನು, ಅತ್ಯರಿಚ್ಯತ-ತನಗಿಂತಲೂ ಬೇರೆಯಾದ ದೇವತಿರ್ಯಙ್ಮನುಷ್ಯಾದಿ ರೂಪಗಳಾಗಿ ಪರಿಣಮಿಸಿದನು. ಪಶ್ಚಾತ್-ಅನಂತರ, ಭೂಮಿಂ-ಭೂಮಿಯನ್ನೂ, ಅಥೋಪುರಃ-ಆಮೇಲೆ ಭೌತಿಕಶರೀರಗಳನ್ನೂ ಸೃಷ್ಟಿಸಿದನು.

**ಪದ್ಯಾನುವಾದ –**

ಉದಿಸಿದುದು ರಾಜಿಪ ಬ್ರಹ್ಮಾಂಡ ಪರಮನಿಂ ।
ಉದಿಸಿದಂ ಬ್ರಹ್ಮಾಂಡಮನಧಿಕರಿಸಿ ಪುರುಷಂ ।
ಉದಿಸಿದರ್ ಪುರುಷನಿಂ ದೇವಮನುಜಾದಿಗಳ್ ।
ಉದಿಸಿದವು ಭೂಮಿಮೇಣ್ ಭೌತಿಕಶರೀರಗಳ್ ॥

---

**ಸಾಯಣಭಾಷ್ಯಾಧಾರ–**

ತಸ್ಮಾತ್–ಆದಿಪುರುಷಾತ್, ವಿರಾಟ್ಬ್ರಹ್ಮಾಂಡದೇಹೋಽಜಾಯತ ಉತ್ಪನ್ನಃ; ವಿವಿಧಾನಿರಾಜಂತೇ ವಸ್ತೂನ್ಯತ್ರೇತಿ ವಿರಾಟ್; ವಿರಾಜೋಽಧಿ–ವಿರಾಡ್ದೇಹಸ್ಯೋಪರಿ ತಮೇವ ದೇಹಮಧಿಕರಣಂ ಕೃತ್ವಾ ಪುರುಷಃತದ್ದೇಹಾಭಿಮಾನೀ ಕಶ್ಚಿತ್ ಪುಮಾನ್ ಅಜಾಯತ; ಅತ್ಯರಿಚ್ಯತ–ಅತಿರಿಕ್ತೋಽಭೂತ್ ವಿರಾಡ್ವ್ಯತಿರಿಕ್ತೋದೇವತಿರ್ಯಙ್ಮನುಷ್ಯಾದಿ ರೂಪೋಽಭೂತ್; ಪುರಃ–ಪೂರ್ಯಂತೇ ಸಪ್ತಭಿರ್ಧಾತುಭಿರಿತಿ ಪುರಃ ಶರೀರಾಣಿ.

ಸರಳಾನುವಾದ—ಪರಮಾತ್ಮನಿಂದ ವಿರಾಟ್ ಎನಿಸುವ ಬ್ರಹ್ಮಾಂಡ ದೇಹದ ಉದಯವಾಯಿತು ; ಈ ಬ್ರಹ್ಮಾಂಡದೇಹದಭಿಮಾನವನ್ನು ಅಧಿಕರಿಸುವ ಪುರುಷನು ಉದಯಿಸಿದನು. ಅವ್ಯಕ್ತವಾದ ಈ ಪುರುಷನು ದೇವ ಮನುಷ್ಯಾದಿ ಜೀವರೂಪವಾಗಿ ಪರಿಣಮಿಸಿದನು. ಅನಂತರ ಇವುಗಳಿಗಾಗಿ ಭೂಮಿ ಮತ್ತು ಭೌತಿಕಶರೀರಾದಿಗಳು ಸೃಷ್ಟಿಸಲ್ಪಟ್ಟವು.

ಪುರುಷಶಬ್ದದಿಂದ ಉಕ್ತವಾಗಿರುವ ಪರಮತತ್ತ್ವವು ಅಪಾರ ವಾದುದು ; ಆದರಿಂದಲೇ ಜಗತ್ತು ಬೆಳೆದು ಬಾಳಿ ಅಳಿವುದು ಎಂಬ ಎರಡು ವಿಷಯಗಳೇ ಪುರುಷಸೂಕ್ತದಲ್ಲಿ ಪ್ರತಿಪಾದಿತವಾಗಿರುವ ಮುಖ್ಯ ವಿಷಯ ಗಳು. ಪುರುಷಸೂಕ್ತದ ಮೊದಲಿನೈದು ಮಂತ್ರಗಳಲ್ಲಿ ಈ ವಿಷಯದ ಸಂಪೂರ್ಣದರ್ಶನವು ಆಗುವುದು. ಉಳಿದ ಮಂತ್ರಗಳಲ್ಲಿ ಇದರ ವಿವರಗಳು ದೊರೆಯುವುವು. ಪುರುಷನನ್ನು ಪಶುವನ್ನಾಗಿ ಭಾವಿಸಿ ಯಜ್ಞಮಾಡಿದುದ ರಿಂದ ಸೃಷ್ಟಿಯಾಯಿತು ; ಯಾವಯಾವ ಪ್ರಾಣಿಗಳು ಯಾವ ವಸ್ತುಗಳು ಪುರುಷನ ಯಾವಯಾವ ಭಾಗದಿಂದ ಉದಯವಾದುವು ಎಂಬುವೇ ಉಳಿದ ಮಂತ್ರಗಳಲ್ಲಿ ಉಕ್ತವಾಗಿದೆ ; ಹೊಸದೇನೂ ಅಲ್ಲಿ ಇಲ್ಲ. ಆದುದರಿಂದ ಪುರುಷಸೂಕ್ತದ ಮೊದಲಿನ ಐದು ಮಂತ್ರಗಳು ಹೆಚ್ಚು ಪಠನಾರ್ಹವಾಗಿವೆ —ಎನ್ನಬಹುದು. ಇದರಲ್ಲಿ ಉಕ್ತವಾದುದು ಪೂರ್ವಸೃಷ್ಟಿಯೆನಿಸಿಕೊಂಡಿದೆ. ಉತ್ತರಸೃಷ್ಟಿಯ ದರ್ಶನವು ಪೂರ್ವಸೃಷ್ಟಿಯ ದರ್ಶನವಾದಮೇಲೆ ಆ ಮುಂದೆ ಸೇರಿಸಿದಂತಿದೆ.

ಮೊದಲನೆಯ ಮಂತ್ರದಲ್ಲಿ ಹೇಳಿರುವಂತೆ ಪರಮಾತ್ಮನು ಅಪಾರ ವೆಂಬುದೇ ಮುಂದಿನ ಮಂತ್ರದಲ್ಲಿಯೂ ಮುಂದುವರೆದಿದೆ. ಯಾವ ಕಾಲ ದಲ್ಲಾಗಲೀ. ಯಾವ ಪ್ರದೇಶದಲ್ಲಾಗಲೀ ಏನೇನಿದೆಯೋ ಅದೆಲ್ಲವೂ ಪರಮಾತ್ಮನೆ ಎಂಬ ಭಾವನೆ ಈ ಮಂತ್ರಗಳಲ್ಲಿ ಚಿತ್ರಿತವಾಗಿದೆ. ಮುಂಡಕೋ ಪನಿಷತ್ತಿನಲ್ಲಿ ಪರಬ್ರಹ್ಮವು "ಸರ್ವಜ್ಞ ಸರ್ವವಿತ್" ಎಂದು ಹೇಳಿದೆಯಷ್ಟೆ. ಸಾವಿರದ ತಲೆಯವನು ಸಾವಿರದ ಕಣ್ಣವನು ಎಂದರೆ ಎಲ್ಲೆಲ್ಲೂ ತಲೆಯುಳ್ಳ ವನು, ಎಲ್ಲೆಲ್ಲೂ ಕಣ್ಣುಳ್ಳವನು ಎಂದು ಹೇಳಿದಂತಾಗುವುದು ; ಇದರಿಂದ ಪರಮಾತ್ಮನನ್ನು ಸರ್ವಜ್ಞ ಸರ್ವವಿತ್ ಎಂದು ಕರೆದಂತೆಯೇ ಆಯಿತು.

"ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂದು ಮುಂತಾಗಿ ಹೇಳಿರುವುದರ ವ್ಯಾಖ್ಯಾನವೋ ಎನ್ನುವಂತೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ "ವಿಶ್ವತೋ ಚಕ್ಷುರುತ ವಿಶ್ವತೋ ಬಾಹುಃ" ಎಂದು ಮುಂತಾಗಿ ಹೇಳಿರುತ್ತದೆ: ಹಾಗೆಂದರೆ ಪರಮಾತ್ಮನಿಗೆ ನಮಗಿರುವಂತೆ ಕಣ್ಣು, ಕಿವಿ, ಕೈಕಾಲುಗಳಿವೆಯೆನ್ನಲಾಗುವುದಿಲ್ಲ; ಸರ್ವೇಂದ್ರಿಯಗಳಿವೆ ಎಂದರೇನೆಂಬುದನ್ನು ಶ್ವೇತಾಶ್ವತರ ಉಪನಿಷತ್ತಿನಿಂದಲೇ ತಿಳಿಯಬೇಕು. "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ"—ಎಂದರೆ ಕೈಯಿಲ್ಲದೆ ಹಿಡಿವನು, ಕಾಲಿಲ್ಲದೆ ನಡೆವನು, ಕಣ್ಣಿಲ್ಲದೆ ನೋಡುವನು ಎಂದು ಅದರಲ್ಲಿ ಹೇಳಿದೆ. "ಸರ್ವೇಂದ್ರಿಯಗುಣಾಭಾಸಂ, ಸರ್ವೇಂದ್ರಿಯ ವಿವರ್ಜಿತಂ। ಸರ್ವಸ್ಯಪ್ರಭುಮೀಶಾನಂ ಸರ್ವಸ್ಯ ಶರಣಂ ಸುಹೃತ್ ॥ ಎಂದೂ ಅದರಲ್ಲಿ ಹೇಳಿದೆ. ಎಲ್ಲಕ್ಕೂ ಒಡೆಯನಾದ ಈಶನಿಗೆ ಇಂದ್ರಿಯಗಳೇ ಇಲ್ಲವಾದರೂ ಸರ್ವೇಂದ್ರಿಯಗಳು ಇದ್ದಂತೆ ಭಾಸವಾಗುತ್ತದೆ ಎಂದರ್ಥ. ಸರ್ವವ್ಯಾಪಿಯಾಗಿ ಎಲ್ಲರ ಇಂದ್ರಿಯಗಳೂ ಅವನವೇ ಆಗಿರುವುದರಿಂದ ಸರ್ವೇಂದ್ರಿಯನೂ ಹೌದು ಎನ್ನಬಹುದು.

ಎತ್ತೆತ್ತ ನೋಡಿದೊಡತತ್ತ ನೀನೇ ದೇವಾ; ಸಕಲ ವಿಸ್ತಾರದ ರೂಪು ನೀನೇ ದೇವಾ; ವಿಶ್ವತೋಚಕ್ಷು ನೀನೇ ದೇವಾ; ವಿಶ್ವತೋಮುಖ ನೀನೇ ದೇವಾ; ವಿಶ್ವತೋಬಾಹು ನೀನೇ ದೇವಾ; ವಿಶ್ವತೋಪಾದ ನೀನೇ ದೇವಾ; ಕೂಡಲಸಮಂಗಮದೇವಾ.

ಪರಮಾತ್ಮನು ಮುಂಡಕೋಪನಿಷತ್ತಿನಲ್ಲಿ ಹೇಳಿರುವಂತೆ "ವಿಭು, ಸರ್ವಗತಂ, ಸುಸೂಕ್ಷ್ಮಂ" ಆಗಿರುವುದರಿಂದ ಅವನ ಪಾರವು ಪಾತಾಳದವರೆಗೆ ಎಂದರೆ ಸಾಲದು; ಬ್ರಹ್ಮಾಂಡದವರೆಗೆ ಎಂದರೆ ಸಾಲದು; ಪಾತಾಳದಿಂದತ್ತತ್ತ ಬ್ರಹ್ಮಾಂಡದಿಂದತ್ತತ್ತ ವ್ಯಾಪಿಸಿರುವನಾದರೂ ಸುಸೂಕ್ಷ್ಮನಾಗಿ ಲಿಂಗಸಾಲಿಗ್ರಾಮಾದಿಗಳಲ್ಲಿ 'ಕರಿ ಕನ್ನಡಿಯೊಳಡಗಿದಂತೆ,' ಅಂತರ್ಗತನಾಗಿ, ಹೀಗೆ ಧ್ಯಾನಿಸಲ್ಪಡುವನು:

ಜಗದಗಲಮುಗಿಲಗಲ ನಿಮ್ಮಗಲ; ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ; ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ; ಅಗಮ್ಯ ಅಗೋಚರ,

ಅಪ್ರತಿಮಲಿಂಗವೇ, ಕೂಡಲಸಂಗಮದೇವಾ ಎನ್ನ ಕರಸ್ಥಳಕ್ಕೆಬಂದು ಚುಳುಕಾದಿರಯ್ಯಾ !!

ಪರಮಪುರುಷನು ಅಪಾರವೆಂಬ ಕಲ್ಪನೆಯು ಮುಂಡಕೋಪನಿಷತ್ತಿನಲ್ಲಿ (೨-೨-೧೧) ಹೀಗೆ ಚಿತ್ರಿಸಲ್ಪಟ್ಟಿದೆ—"ಬ್ರಹ್ಮೈವೇದಮಮೃತ ಪುರುಸ್ತಾತ್‌ಬ್ರಹ್ಮ, ಪಶ್ಚಾದ್‌ಬ್ರಹ್ಮ, ದಕ್ಷಿಣತಶ್ಚೋತ್ತರೇಣ, ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ, ವಿಶ್ವಮಿದಂ ವರಿಷ್ಠಂ" ಹಿಂದೆ ಮುಂದೆ ಮೇಲೆ ಕೆಳಗೆ ಎಡಕ್ಕೆ ಬಲಕ್ಕೆ ಇರುವುದೇನೇನಿದೆಯೋ ಅದೆಲ್ಲವೂ ಬ್ರಹ್ಮವೇ ಎಂಬ ಚಿತ್ರವನ್ನು ಉಪನಿಷತ್ತು ಇಲ್ಲಿ ನಮ್ಮ ಮುಂದೆ ಇಟ್ಟಿದೆ. ಹಾಗೆಂದಮೇಲೆ ಸೂರ್ಯ, ಚಂದ್ರ, ತಾರಕೆಗಳೂ, ಅಗ್ನಿ, ಮಿಂಚುಗಳೂ ಎಲ್ಲವೂ ಪರಬ್ರಹ್ಮವೇ ಆಗಿರಬೇಕಲ್ಲವೆ; ಆದರೂ ಅದೇ ಉಪನಿಷತ್ತಿನಲ್ಲಿಯೇ—"ನತತ್ರ ಸೂರ್ಯೋಭಾತಿ, ನ ಚಂದ್ರ ತಾರಕಂ, ನೇಮಾ ವಿದ್ಯುತೋಭಾಂತಿ ಕುತೋಯಮಗ್ನಿಃ" ಎಂದರೆ ನಿಷ್ಕಲಬ್ರಹ್ಮದಲ್ಲಿ ಸೂರ್ಯ, ಚಂದ್ರ, ತಾರಕೆಗಳಾಗಲೀ, ಅಗ್ನಿ, ಮಿಂಚುಗಳಾಗಲಿ ಬೆಳಗುವುದಿಲ್ಲ ಎಂದು ಹೇಳಿದೆ. ಕಾರಣವೇನೆಂದರೆ ಪುರುಷಸೂಕ್ತದಲ್ಲಿ ಹೇಳಿದಂತೆ ಕಿಂಚಿದಂಶದಿಂದ ಪರಬ್ರಹ್ಮವು ಸೂರ್ಯ, ಚಂದ್ರ, ತಾರಕಾದಿ ಜಗತ್ತಾಗಿರುವುದು ; ಹೀಗಾಗಲು ಅದು ಶಕ್ತಿವಿಶಿಷ್ಟವಾಗುವುದು ಎಂದರೆ ಸಕಲವಾಗುವುದು ಉಳಿದ ಭಾಗವು ನಿಷ್ಕಲವಾಗಿಯೇ ಉಳಿದಿರುವುದು. "ಅತ್ಯತಿಷ್ಠದ್ದಶಾಂಗುಲಂ" ಎಂದೂ, "ತ್ರಿಪಾದಸ್ಯಾಮೃತಂದಿವಿ" ಎಂದೂ ಒಂದು ಮತ್ತು ಮೂರನೆಯ ಮಂತ್ರದಲ್ಲಿ ಹೇಳಿರುವುದು. ಇದರ ವಿಷಯದಲ್ಲಿಯೇ. ಮೇಲೆ ಹೇಳಿದ ಉಪನಿಷತ್ ಮಂತ್ರದ ಹಿಂದಿನ ಮಂತ್ರದಲ್ಲಿ ಈ ಸ್ಥಿತಿಯನ್ನು "ವಿರಜಂ ಬ್ರಹ್ಮನಿಷ್ಕಲಂ ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ" ಎಂದು ಹೇಳಿದೆ ಇದನ್ನೇ ಸುಲಭವಾಗಿ ಪುರುಷಸೂಕ್ತದ ೩ ಮತ್ತು ೪ನೆಯ ಮಂತ್ರಗಳ ಪದ್ಯಾನುವಾದದಿಂದ ಹೇಳಬಹುದು :

ಇದು ಎಲ್ಲ ಭೂತಮುಂ ಪರಮನ ಚತುರ್ಥಾಂಶ ।
ಪರಮಲಮೃತಂ ದಿವಿಯೊಳುಳಿದ ಮುಪ್ಪಾಗಂಶ ॥

ಪುರುಷನೊಳ್ ಮುಪ್ಪಾಗ ಊರ್ಧ್ವಲೋಕದೊಳಿಹುದು ।
ತಿರುತಿರುಗಿ ಕಾಲಂಶ ಇಹದೊಳಗೆ ಬರುತಿಹುದು ।
ಧರಿಸುತ್ತ ಭೋಕ್ತೃಭೋಗ್ಯಾದಿರೂಪದಿಂದದು ।
ತರತರದ ರೂಪದಲಿ ಜಗವನಾಕ್ರಮಿಸಿಹುದು ॥

ಪರಾತ್ಪರದ ಒಂದು ಅಂಶವು ಜಗತ್ತಾಗಿ ಪರಿಣಮಿಸುವುದೆಂಬುದು ಭಗವದ್ಗೀತೆಗೂ. ಬ್ರಹ್ಮಸೂತ್ರಕ್ಕೂ ಮಾನ್ಯವಾದುದು. "ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ" ಎಂದು ಗೀತೆಯಲ್ಲಿ ಹೇಳಿದೆ. ಭಗವದ್ಗೀತೆಯಲ್ಲಿ (೧೦-೪೨) "ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" ಎಂದರೆ ಭಗವಂತನು ಜಗತ್ತನ್ನು ತನ್ನ ಒಂದು ಅಂಶದಿಂದ ವ್ಯಾಪಿಸಿದ್ದೇನೆ ಎಂದು ಹೇಳುತ್ತಾನೆ. "ಏಕಾಂಶೇನ-ಏಕಾವಯವೇನ ಸರ್ವಭೂತಸ್ವರೂಪೇಣ" ಎಂಬುದು ಇದರ ಶಾಂಕರ ಭಾಷ್ಯ. "ಅಂಶೋನಾನಾವ್ಯಪದೇಶಾತ್" ಎಂಬುದೊಂದು ಸೂತ್ರವು ಬ್ರಹ್ಮಸೂತ್ರದ ಈ ನಿಲುವನ್ನು ಸಮರ್ಥಿಸುತ್ತದೆ ಪುರುಷಸೂಕ್ತದ ಮೂರನೆಯ ಮಂತ್ರವು ಸ್ವಲ್ಪ ಹೆಚ್ಚು ಕಡಮೆ ಅದೇ ಪದಗಳಿಂದ ಛಾಂದೋಗ್ಯ ಉಪನಿಷತ್ತಿನಲ್ಲಿ (೩-೧೨-೬) ಉದ್ಧೃತವಾಗಿದೆ.

ಮುಂಡಕೋಪನಿಷತ್ತಿನ ಈ ಆಧಾರಗಳಲ್ಲಿ ಕಂಡುಬರುವ ಮುಖ್ಯ ವಿಷಯ 'ಸಂಭವತೀಹ ವಿಶ್ವಂ' ಎಂಬುದು; ಜಗತ್ತು ಸಂಭವಿಸುತ್ತದೆ ಎನ್ನುವ ಮಾತಿನಲ್ಲಿ ಇಂದ್ರನೋ ವಿಶ್ವಕರ್ಮನೋ ಜಗತ್ತನ್ನು ನಿರ್ಮಿಸಿದನು ಎನ್ನುವ ಕಲ್ಪನೆಗಿಂತ ಬೇರೆಯಾದ ಕಲ್ಪನೆಯಿದೆ. ವನದಲ್ಲಿ ಮರಗಳನ್ನು ಕಡಿದು ಪರ್ಣಕುಟೀರವನ್ನು ಅಥವಾ ಯಜ್ಞಶಾಲೆಯನ್ನು ಕಟ್ಟಿದಂತೆ ಜಗತ್ತು ಕಟ್ಟಲ್ಪಟ್ಟಿತೆಂಬ ಕಲ್ಪನೆ ಈ ಮಂತ್ರಗಳಲ್ಲಿ ಇಲ್ಲ. ಪುರುಷಸೂಕ್ತದಲ್ಲಿ ಯಾದರೋ ಜಗತ್ತು ಬ್ರಹ್ಮದಿಂದ ಆವಿರ್ಭಾವವಾದ ಕಲ್ಪನೆಯು ಇದೆ. 'ಯದನ್ನೇನ ಅತಿರೋಹತಿ' ಎಂಬ ಪದಗಳು ಪುರುಷಸೂಕ್ತದ ಎರಡನೆಯ ಮಂತ್ರದಲ್ಲಿವೆ. ಈ ಪದಗಳ ಸಾಯಣಭಾಷ್ಯವು ಹೀಗಿದೆ-- "ಯದ್-ಯಸ್ಮಾತ್ ಕಾರಣಾತ್, ಅನ್ನೇನ-ಪ್ರಾಣಿನಾಂ ಭೋಗ್ಯೇನ ಅನ್ನೇನ ನಿಮಿತ್ತಭೂತೇನ, ಅತಿರೋಹತಿ-ಸ್ವಕೀಯಾಂ ಕಾರಣಾವಸ್ಥಾಂ ಅತಿಕ್ರಮ್ಯ ಪರಿದೃಶ್ಯಮಾನಾಂ ಜಗದವಸ್ಥಾಂ ಪ್ರಾಪ್ನೋತಿ"

'ಅನ್ನೇನ ಅತಿರೋಹತಿ' ಎಂಬ ಪದಗಳು ಇಂಗ್ಲಿಷ್‌ನಲ್ಲಿ ಹೀಗೆ ಭಾಷಾಂತರಿಸಲ್ಪಟ್ಟಿವೆ—"He mounts (beyond his own condition) for the food (of living beings) ಪರಬ್ರಹ್ಮದಿಂದ ಹೊರಹೊಮ್ಮಿದ ಜೀವಿಗಳ ರಕ್ಷಣಾರ್ಥವಾಗಿ ಪರಬ್ರಹ್ಮವು ಕಿಂಚಿದಂಶದಿಂದ ಅನ್ನರೂಪವಾಗಿ ಹೊರಹೊಮ್ಮುವುದೆಂಬುದು ಈ ಎಲ್ಲ ಆಧಾರಗಳಿಂದ ವ್ಯಕ್ತವಾಗುವುದು.

ಜಗತ್ತು, ಬ್ರಹ್ಮದ ಕಿಂಚಿದಂಶದಿಂದ ಪರಿಣಾಮವೆಂಬ ಅಭಿಪ್ರಾಯವಂತೂ ಇಲ್ಲಿ ಇದ್ದೇ ಇದೆ. ಆದರೆ ಅನ್ನವೆಂಬ ಪದಕ್ಕೆ ಆಹಾರ ಎಂಬ ಅರ್ಥಕ್ಕಿಂತಲೂ ಹೆಚ್ಚು ವ್ಯಾಪಕವಾದ ಅರ್ಥವಿರುವಂತಿದೆ—ಮುಂಡಕೋಪನಿಷತ್ತಿನ ಆಧಾರಗಳೇ ಪುರುಷಸೂಕ್ತದ ಈ ಮಂತ್ರಗಳ ಅರ್ಥವನ್ನು ತಿಳಿಯಲು ಹೆಚ್ಚು ಸಹಾಯಕವಾಗಿವೆ. "ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ । ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಂ ॥" ಎಂಬ ಮಂತ್ರವು "ಯಥೋರ್ಣನಾಭಿಃ" ಎಂದು ಮೊದಲಾಗುವ ಜಗದಾವಿರ್ಭಾವ ವಿಷಯವಾದುದೆಂದು ಮೇಲೆ ವಿವರಿಸಿದ ಮಂತ್ರದ ಮುಂದಿನದು. ಪರಬ್ರಹ್ಮವು ತಪಸ್ಸಿನಿಂದ ಉಬ್ಬುತ್ತದೆ ; ಅದರಿಂದ ಅನ್ನವು, ಅನ್ನದಿಂದ ಪ್ರಾಣವು ಮನಸ್ಸು, ಸತ್ಯವು ಲೋಕಗಳು, ಕರ್ಮಗಳಲ್ಲಿ ಅಮೃತವು ಆಗುತ್ತವೆಂದು ಈ ಮಂತ್ರದಲ್ಲಿ ಹೇಳಿದೆ. ಈ ಮಂತ್ರದ ಶಾಂಕರಭಾಷ್ಯದಲ್ಲಿ "ಅನ್ನಂ-ಅವ್ಯಾಕೃತಂ" ಎಂದು ಅರ್ಥವನ್ನು ಹೇಳಿದೆ. ಏಕೆಂದರೆ ಅನ್ನದಿಂದ ಪ್ರಾಣ, ಮನಸ್ಸು ಮೊದಲಾದವು ಹೊರಹೊಮ್ಮುವುವೆಂದು ಮಂತ್ರದಲ್ಲಿಯೇ ಹೇಳಿದೆ. ಆದುದರಿಂದ ಪುರುಷಸೂಕ್ತದ ಎರಡನೆಯ ಮಂತ್ರದಲ್ಲಿರುವ "ಅನ್ನ" ಪದಕ್ಕೆ ಪ್ರಕೃತಿ ಅವ್ಯಾಕೃತ, ಅವ್ಯಕ್ತ, ಮಾಯಾಶಕ್ತಿ ಎಂಬ ನಾಮರೂಪ ಜಗತ್ತಿಗೆ ಕಾರಣವಾದ ಸ್ಥಿತಿಯೆಂದು ಅರ್ಥಮಾಡಬೇಕಾಗುವುದು. ಮುಂದೆ ನಾಲ್ಕನೆಯ ಮಂತ್ರದಲ್ಲಿ ಬ್ರಹ್ಮವು ಭೋಕ್ತೃಭೋಗ್ಯಾದಿರೂಪದಲ್ಲಿ ಹೊರಹೊಮ್ಮುವುದನ್ನೂ, ಐದನೆಯ ಮಂತ್ರದಲ್ಲಿ ಭೂಮಿ ಮತ್ತು ಭೌತಿಕಶರೀರಗಳಾಗುವುದನ್ನೂ ವಿವರಿಸಿರುವುದರಿಂದ ಎರಡನೆಯ ಮಂತ್ರದಲ್ಲಿ ಅನ್ನ

ವೆಂದರೆ ಅವುಗಳೆಲ್ಲಕ್ಕೂ ಕಾರಣವಾದ ಪ್ರಕೃತಿ ಅಥವಾ ಮಾಯಾಶಕ್ತಿಯೆಂದು ಅರ್ಥಮಾಡುವುದೇ ಸರಿಯೆನಿಸುವುದು.

ಮುಂಡಕೋಪನಿಷತ್ತಿನ ಈ ಮಂತ್ರದಲ್ಲಿ "ತಪಸಾ ಚೀಯತೇ ಬ್ರಹ್ಮ" ಎಂಬ ಪದಗಳು ಗಮನಾರ್ಹವಾಗಿವೆ. ಪುರುಷಸೂಕ್ತದಲ್ಲಿ ಪರಬ್ರಹ್ಮದಿಂದ ಜಗತ್ತು ಆವಿರ್ಭಾವವಾಗುತ್ತದೆ ಎಂಬ ಅಭಿಪ್ರಾಯವನ್ನು ಈ ಪದಗಳು ಪುಷ್ಟೀಕರಿಸುತ್ತವೆ. ಸೃಷ್ಟಿಯಾಗುವ ಮೊದಲು ಬ್ರಹ್ಮವು ತಪಸ್ಸಿನಿಂದ ಉಬ್ಬುತ್ತದೆಂದು ಈ ಪದಗಳಿಗೆ ಅರ್ಥ. ನಾಸದೀಯಸೂಕ್ತದಲ್ಲಿ "ಕಾಮಸ್ತದಗ್ರೇ" ಎಂದು ಮೊದಲಾಗುವ ಮಂತ್ರದಲ್ಲಿ ಜಗತ್ಸೃಷ್ಟಿಗಾಗಿ ಇಚ್ಛಾಶಕ್ತಿಯು ಆವಿರ್ಭಾವವಾಗುವುದನ್ನು ಹೇಳಿದೆ. ಅದರಲ್ಲಿಯೇ "ತಪಸಾತನ್ಮಹಿನಾಽಜಾಯತೈಕಂ" ಎಂದು ಹೇಳಿದೆ. ಅದರ ಸಾಯಣ ಭಾಷ್ಯದಲ್ಲಿ "ತಪಸಃ ಸ್ರಷ್ಟವ್ಯ ಪರ್ಯಾಲೋಚನರೂಪಸ್ಯ ಮಹಿನಾ ಮಹಾತ್ಮ್ಯೇನ ಅಜಾಯತ ಉತ್ಪನ್ನಂ" ಎಂದು ಹೇಳಿರುವುದಲ್ಲದೆ ಮುಂಡಕೋಪನಿಷತ್ತಿನಲ್ಲಿ "ಜ್ಞಾನಮಯಂ ತಪಃ" ಎಂದು ಮುಂದಿನ ಮಂತ್ರದಲ್ಲಿ ಹೇಳಿರುವುದರ ಆಧಾರವನ್ನು ತೆಗೆದುಕೊಂಡಿದೆ. "ತಪಸಾ ಚೀಯತೆ" ಎಂಬ ಪದಗಳ ಶಾಂಕರಭಾಷ್ಯದಲ್ಲಿ "ತಪಸಾ ಜ್ಞಾನೇನ ಉತ್ಪತ್ತಿ ವಿಧಿಜ್ಞತಯಾ ಭೂತಯೋನಿ ಅಕ್ಷರಂ ಬ್ರಹ್ಮ ಚೀಯತೇ ಉಪಚೀಯತೇ" ಎಂದು ಹೇಳಿದೆ. ಯಾವುದಾದರೂ ಕಾರ್ಯವನ್ನು ಮಾಡಲು ಇಚ್ಛಿಸಿದಾಗ ಅದನ್ನು ಹೇಗೆ ಮಾಡಬೇಕೆಂಬ ಜ್ಞಾನವು ಆಗಬೇಕಷ್ಟೆ. ಸೃಷ್ಟಿಸುವಾಗ ಬ್ರಹ್ಮವು ಜ್ಞಾನಶಕ್ತಿಯಿಂದ ಕೂಡಿ ಉಬ್ಬಿತೆಂದು ಮಂತ್ರಭಾಗದ ಅಭಿಪ್ರಾಯ. ಜಗತ್ಸೃಷ್ಟಿಯಾಗುವ ಮೊದಲು "ಜ್ಞಾನಕ್ರಿಯಾ ಶಕ್ತ್ಯಧಿಷ್ಠಿತ"ವಾಗಬೇಕೆಂದು ಈ ಮಂತ್ರದ ಶಾಂಕರಭಾಷ್ಯದಲ್ಲಿ ಹೇಳಿದೆ. ಇದರ ಆನಂದಗಿರಿ ಟೀಕೆಯಲ್ಲಿ "ಜ್ಞಾನಶಕ್ತಿಭಿಃ, ಕ್ರಿಯಾಶಕ್ತಿಭಿಃ ಚ ಅಧಿಷ್ಠಿತಂ ವಿಶಿಷ್ಟಂ" ಎಂಬ ವಿವರಣೆಯಿದೆ. ಪರಬ್ರಹ್ಮವು ಇಚ್ಛಾ, ಜ್ಞಾನ, ಕ್ರಿಯಾಶಕ್ತಿವಿಶಿಷ್ಟವಾಗಿ ಜಗತ್ತನ್ನು ಹೊರಹೊಮ್ಮಿಸುವುದೆಂಬ ನಿಲುವೇ ಈ ಎಲ್ಲ ಆಧಾರಗಳಿಂದ ಸಿದ್ಧವಾಗುವುದು.

ಪುರುಷಸೂಕ್ತದ ನಾಲ್ಕನೆಯ ಮಂತ್ರದಲ್ಲಿ ಪರಮಪುರುಷನ

ಬಹ್ವಂಶವು ನಿಷ್ಕಲವಾಗಿಯೇ ಊರ್ಧ್ವಲೋಕದಲ್ಲಿ ಉಳಿದುಕೊಂಡು, ಕಿಂಚಿದಂಶವು ಸಕಲವಾಗಿ "ಸಾಶನಾನಶನ" ರೂಪವಾದ ಜಗತ್ತಾಗಿ ಮತ್ತೆ ಮತ್ತೆ ಆವಿರ್ಭೂತವಾಗುವುದನ್ನು ಹೇಳಿದ್ದರೂ, ಚರಾಚರಾತ್ಮಕ ಪ್ರಪಂಚ ವೆಂದು ಹೇಳದೆ ಸಾಶನ ಅನಶನ, ಎಂದು ಹೇಳಿದೆ. ಸಾಶನ ಅನಶನ— ಎಂಬ ಪದಗಳು ಭೋಕ್ತೃಭೋಗ್ಯರೂಪವಾದ ಪ್ರಪಂಚವನ್ನು ನಿರ್ದೇಶಿಸು ತ್ತವೆ. ನಾಸದೀಯಸೂಕ್ತದ ಐದನೆಯ ಮಂತ್ರದ ಅರ್ಥವನ್ನು ವಿವರಿಸುವ ಸಾಯಣಭಾಷ್ಯದಲ್ಲಿ "ಮಾಯಾಸಹಿತಃ ಪರಮೇಶ್ವರಃ ಸರ್ವಂ ಜಗತ್ ಸೃಷ್ಟ್ವಾ ಸ್ವಯಂಚಾನುಪ್ರವಿಶ್ಯ ಭೋಕ್ತೃಭೋಗ್ಯಾದಿ ರೂಪೇಣ ವಿಭಾಗಂ ಕೃತವಾನಿತ್ಯರ್ಥಃ" ಎಂದು ಹೇಳಿದೆಯಾಗಿ ಮಾಯಾಸಹಿತಃ ಪರಮೇಶ್ವರಃ ಎಂದರೆ ಶಕ್ತಿವಿಶಿಷ್ಟನಾದ ಪರಮೇಶ್ವರನು ಭೋಕ್ತೃ ಭೋಗ್ಯಾದಿ ರೂಪವಾಗಿ ಪರಿಣಮಿಸಿರುವುದು ವ್ಯಕ್ತವಾಗುತ್ತದೆ. "ತಸ್ಮಾದ್ವಿ ರಾಳಜಾಯತ ವಿರಾಜೋ ಅಧಿಪೂರುಷಃ" ಪರಬ್ರಹ್ಮದಿಂದ, ವಿವಿಧವಾಗಿ ರಾರಾಜಿಸುವುದರಿಂದ ವಿರಾಟ್ ಎನಿಸುವ ಬ್ರಹ್ಮಾಂಡವೂ ಅದನ್ನು ಆಳುವ ಪುರುಷ ಎಂದರೆ ಈಶ್ವರನೂ ಹೊರಹೊಮ್ಮುವರು. ಶ್ವೇತಾಶ್ವತರೋಪನಿ ಷತ್ತಿನಲ್ಲಿ "ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್" ಎಂದೂ, ಇದನ್ನನುಸರಿಸಿಯೇ ಸಿದ್ಧಾಂತ ಶಿಖಾಮಣಿಯಲ್ಲಿ "ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತು ತ್ರಯಮಿದಂ ಸ್ಮೃತಂ" ಎಂದೂ ಹೇಳಿದೆ. ಶ್ವೇತಾಶ್ವತರೋಪನಿಷತ್ತಿನ ಈ ಮಂತ್ರದ ಭಾಷ್ಯದಲ್ಲಿ ಪ್ರೇರಿತಾರಂ ಎಂದರೆ ಈಶ್ವರನೆಂದು ಅರ್ಥ ಮಾಡಿದೆ. ಶ್ವೇತಾಶ್ವತರ ಉಪನಿಷತ್ತಿನ ಈ ಮಂತ್ರದಂತೆ ಪರಬ್ರಹ್ಮವು ಭೋಕ್ತೃಭೋಗ್ಯ ಮತ್ತು ಈಶ್ವರ ಎಂಬ ಮೂರು ರೂಪವಾಗಿ ಆವಿರ್ಭವಿಸಿ ದರೂ ಇದೆಲ್ಲವೂ ಬ್ರಹ್ಮವೇ ಎಂಬುದು ಸ್ಪಷ್ಟವಾಗಿದೆ. ಪುರುಷನೆಂಬೊಬ್ಬ ವ್ಯಕ್ತಿಯು ಚರಾಚರಾತ್ಮಕ ಪ್ರಪಂಚವನ್ನು ಸೃಷ್ಟಿಸಿದನು ಎಂಬ ಭಾವನೆಯು ಈ ಮಂತ್ರಗಳಲ್ಲಿ ಬರದೆ 'ಪುರುಷ'-ಎಂಬ ಪರಮತತ್ತ್ವದಿಂದ ಚರಾಚರಾ ತ್ಮಕ ಜಗತ್ತು ಆವಿರ್ಭಾವವಾಯಿತೆಂಬುದೇ ಪುರುಷಸೂಕ್ತದ ಅಭಿಪ್ರಾಯ- ಎಂಬುದನ್ನು ಮನಗಾಣಬೇಕು.

**ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।**
**ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥**

ಪ್ರತಿಪದಾರ್ಥ—ಯತ್-ಯಾವಾಗ ದೇವಾದಿಗಳು ಉತ್ಪನ್ನರಾದರೋ ಆಗ, ದೇವಾಃ-ಪುರುಷನಿಂದ ಹೊರಹೊಮ್ಮಿದ ದೇವತೆಗಳು, ಪುರುಷೇಣ ಹವಿಷಾ-ಪುರುಷನನ್ನೇ ಹವಿಸ್ಸನ್ನಾಗಿ ಮಾಡಿ, ಯಜ್ಞಂ-ಯಜ್ಞವನ್ನು, ಅತನ್ವತ-ನೆರವೇರಿಸಿದರು, ಅಸ್ಯ-ಅದಕ್ಕೆ, ವಸಂತಃ-ವಸಂತಋತುವು, ಆಜ್ಯಂ-ತುಪ್ಪವು. ಗ್ರೀಷ್ಮಃ-ಗ್ರೀಷ್ಮಋತುವು, ಇಧ್ಮಃ-ಸಮಿತ್ತು, ಶರತ್-ಶರದೃತುವು, ಹವಿಃ-ಹವಿಸ್ಸು, ಆಸೀತ್-ಆಯಿತು.

ಪದ್ಯಾನುವಾದ—

ನೆರೆಗೈದುದಾಗಲಾ ದೇವತತಿ ಯಜ್ಞಮಂ ।
ಪುರುಷನವನೇ ಹವಿಸ್ಸೆಂಬ ಸಂಕಲ್ಪದಿಂ ।
ಪರಿಕಿಸಲ್ ಸಮಿತ್ತಾಯ್ತು ಗ್ರೀಷ್ಮಋತು ಪಲಂ ।
ಶರದೃತುವು ಹವಿಸ್ಸಾಯ್ತಾಜ್ಯಮೆನೆ ವಸಂತಂ ॥

ಸರಳಾನುವಾದ—ಹಿಂದಿನ ಮಂತ್ರದಲ್ಲಿ ಹೇಳಿದಂತೆ ಪುರುಷನಿಂದ ಹೊರಹೊಮ್ಮಿದ ದೇವತೆಗಳು ಯಜ್ಞಮಾಡಲು ಅವಶ್ಯವಾದ ಬಾಹ್ಯದ್ರವ್ಯಗಳು ಇನ್ನೂ ಹುಟ್ಟಿರಲಿಲ್ಲವಾಗಿ ಪುರುಷನನ್ನೇ ಹವಿಸ್ಸೆಂದು ಭಾವಿಸಿ ಮಾನಸಿಕಯಜ್ಞವನ್ನು ಮಾಡಿದರು.[1] ವಸಂತಋತುವು ಆಜ್ಯವಾಗಿಯೂ ಗ್ರೀಷ್ಮಋತು ಸಮಿತ್ತಾಗಿಯೂ, ಶರದೃತುವು ಹವಿಸ್ಸಾಗಿಯೂ ಭಾವಿಸಲ್ಪಟ್ಟವು.[2]

---

ಸಾಯಣಭಾಷ್ಯಾಧಾರ—

1. ಯತ್-ಯದಾ ಪೂರ್ವೋಕ್ತ ಕ್ರಮೇಣೈವ ಶರೀರೇಷು ಉತ್ಪನ್ನೇಷು ದೇವಾಃ ಉತ್ತರಸೃಷ್ಟಿ ಸಿದ್ಧ್ಯರ್ಥಂ ಬಾಹ್ಯದ್ರವ್ಯಸ್ಯ ಅನುತ್ಪನ್ನತ್ವೇನ ಹವಿರಂತರಾಸಂಭವಾತ್ ಪುರುಷಸ್ವರೂಪಮೇವ ಮನಸಾ ಹವಿಷ್ಟ್ವೇನ ಸಂಕಲ್ಪ್ಯ ಪುರುಷಾಖ್ಯೇನ ಹವಿಷಾ ಮಾನಸಂ ಯಜ್ಞಮತನ್ವತ.

2. ಪೂರ್ವಂ ಪುರುಷಸ್ಯ ಹವಿಃ ಸಾಮಾನ್ಯರೂಪತ್ವೇನ ಸಂಕಲ್ಪಃ ಅನಂತರಂ ವಸಂತಾದೀನಾಂ ಆಜ್ಯಾದಿ ವಿಶೇಷರೂಪತ್ವೇ ಸಂಕಲ್ಪ ಇತಿ ದ್ರಷ್ಟವ್ಯಂ।

ವಿಮರ್ಶಾತ್ಮಕ ವಿವರಣೆ—ಸೃಷ್ಟಿಯು ಹೇಗಾಯಿತೆಂಬುದು ಪುರುಷಸೂಕ್ತದಲ್ಲಿ ಹೇಳಿರುವ ಮುಖ್ಯ ವಿಷಯವಾಗಿದೆ. ಜಗತ್ತೆಲ್ಲವನ್ನೂ ವ್ಯಾಪಿಸಿರುವ ಪರಮಾತ್ಮನ ಹೊರತು ಬೇರೆ ಏನೂ ಇಲ್ಲವೆಂದು ಮೊದಲೆರಡು ಮಂತ್ರಗಳಲ್ಲಿಯೇ ಸೂಚಿಸಿ. ಈ ಜಗತ್ತಿನಲ್ಲಿಯೇ ಅವನ ಇರವು ಪರ್ಯವಸಾನವಾಗದೆ ಅದನ್ನು ಅತಿಕ್ರಮಿಸಿ ಸಹಾ ಇರುವುದೆಂಬು ದನ್ನು ಹೇಳಿದೆ. ಮುಂದಿನೆರಡು ಮಂತ್ರಗಳಲ್ಲಿ. ಪರಮಾತ್ಮನ ಕಿಂಚಿದಂಶವು ಮಾತ್ರ ಜಗತ್ತಾಗಿ ಉಳಿದಂಶವೆಲ್ಲವೂ ಅವಿಕಾರವಾಗಿ ಸ್ವಪ್ರಕಾಶದಲ್ಲಿರುವು ದೆಂಬುದನ್ನು ಹೇಳಿದೆ. ಪರಮಪುರುಷನಿಂದ ಮನೋಹರವಾದ ಬ್ರಹ್ಮಾಂಡ ವೆಂಬ ವಿರಾಟ್ ಉದಿಸುವುದೆಂದೂ, ಅದನ್ನೆಲ್ಲ ಅಧಿಕರಿಸಿ ಪುರುಷನೋರ್ವನು ಉದಿಸುವನೆಂದೂ. ಭೂಮಿ ಮತ್ತು ಭೌತಿಕಶರೀರಗಳು ಉದಿಸುವುವೆಂದೂ ಐದನೆಯ ಮಂತ್ರದಲ್ಲಿ ಹೇಳಿದೆ. ಪರಮಪುರುಷನು ಭೋಕ್ತೃಭೋಗ್ಯ ಮತ್ತು ಈಶ್ವರನೆಂಬ ಮೂರು ರೂಪದಲ್ಲಿ ಮತ್ತೆ ಮತ್ತೆ ಆವಿರ್ಭವಿಸುವನೆಂದು ನಾಲ್ಕು ಮತ್ತು ಐದನೆಯ ಮಂತ್ರಗಳಲ್ಲಿ ಹೇಳಿ, ಸೃಷ್ಟಿಸ್ಥಿತಿಲಯಕಾರ್ಯ ಗಳು ಪದೇ ಪದೇ ಆಗುತ್ತಿರುವುವೆಂಬುದನ್ನು ವ್ಯಕ್ತಪಡಿಸಿದೆ. ಮೊದಲಿನೈದು ಮಂತ್ರಗಳಲ್ಲಿ ಹೇಳಿರುವುದರಲ್ಲಿಯೇ ಸೃಷ್ಟಿ ಕಲ್ಪನೆಯ ರೂಪುರೇಖೆಗಳ ಪೂರ್ಣ ದರ್ಶನವು ಆಗುವುದು. ಇನ್ನು ಈ ಆರನೆಯ ಮಂತ್ರದಿಂದ ಮುಂದೆ, ದೇವತೆಗಳು ಮಾಡಿದ ಯಜ್ಞದಿಂದ ಸೃಷ್ಟಿಯಾಯಿತೆಂಬ ಕಲ್ಪನೆಯ ವಿವರಗಳು ರೂಪುಗೊಳ್ಳುತ್ತವೆ. ಇದು ಮಾನಸಿಕಯಜ್ಞ; ಮಾನಸಿಕಯಜ್ಞವು ವೇದಗಳಲ್ಲಿ ಉಕ್ತವಾಗದೆ ಹೋಗಿಲ್ಲ. ಯಜ್ಞದಿಂದಲೇ ಸರ್ವಸ್ವವೆಂಬ ಭಾವನೆಯಿರುವ ವೇದದಲ್ಲಿ ಸೃಷ್ಟಿಯೂ ಒಂದು ಯಜ್ಞದ ಫಲವೆಂದು ಭಾವಿಸಲ್ಪಟ್ಟಿದೆ. ಮನುಷ್ಯರು ಭೂಮಿಯಲ್ಲಿ ಪಶುಯಜ್ಞವನ್ನು ಮಾಡುವಂತೆ ಯಜ್ಞಮಾಡಲು ಸೃಷ್ಟಿಯೇ ಆಗಿರಲಿಲ್ಲವಷ್ಟೆ. ಆದುದರಿಂದ ಸೃಷ್ಟಿಗೆ ಪೂರ್ವದಲ್ಲಿ ನಡೆದ ಈ ಯಜ್ಞ ಮಾನಸಿಕವಾದುದು.

ಐದನೆಯ ಮಂತ್ರದಲ್ಲಿ ಆದಿಪುರುಷನಿಂದ ವಿರಾಟ್ ಎಂಬ ಬ್ರಹ್ಮಾಂಡ ದೇಹವಾದುದನ್ನೂ, ಆ ದೇಹದಭಿಮಾನಿಯಾದ ಪುರುಷನು ಹುಟ್ಟಿದುದನ್ನೂ ಮೊದಲು ಹೇಳಿದೆ. ಅನಂತರ ದೇವತಿರ್ಯಙ್ಮನುಷ್ಯಾದಿ ಜೀವರಾಶಿ

ಯಾದುದನ್ನೂ, ಪಂಚಭೌತಾತ್ಮಿಕ ಶರೀರಗಳಾದುದನ್ನೂ ಹೇಳಿದೆ. ಇದಕ್ಕೆ ಪೂರ್ವ ಸೃಷ್ಟಿಯೆಂದು ಹೆಸರು. ಇನ್ನು ಆರನೆಯ ಮಂತ್ರದಿಂದ ಉತ್ತರ ಸೃಷ್ಟಿಯನ್ನು ಹೇಳಿದೆ. ಸಾಯಣಭಾಷ್ಯದಿಂದ ತಿಳಿದುಬರುವಂತೆ ಅದನ್ನು ಆಚರಿಸಿದವರು ಪೂರ್ವ ಸೃಷ್ಟಿಯಲ್ಲಿ ಉತ್ಪನ್ನರಾದ ದೇವತೆಗಳು; ಯಜ್ಞಕ್ಕೆ ಬೇಕಾದ ಬಾಹ್ಯದ್ರವ್ಯಗಳು ಇನ್ನೂ ಸೃಷ್ಟಿಯಾಗಿರಲಿಲ್ಲ; ಆದುದರಿಂದ ಪುರುಷನನ್ನೇ ಹವಿಸ್ಸನ್ನಾಗಿ ಸಂಕಲ್ಪಿಸಿ, ಅವರು ಮಾನಸಿಕಯಜ್ಞವನ್ನು ಮಾಡಿದರೆಂಬುದು ಆರನೆಯ ಮಂತ್ರದ ಮೊದಲಭಾಗದಲ್ಲಿ ಹೇಳಿದೆ. ಅನಂತರ ವಿವರವಾಗಿ ಯಜ್ಞಕ್ಕೆ ಅವಶ್ಯವಾದವುಗಳನ್ನು ಹೇಗೆ ಸಂಕಲ್ಪಿಸಿ ಯಜ್ಞ ಮಾಡಿದರೆಂಬುದನ್ನು ಆರನೆಯ ಮಂತ್ರದ ಕೊನೆಯ ಭಾಗದಲ್ಲಿಯೂ ಏಳನೆಯ ಮತ್ತು ಹದಿನೈದನೆಯ ಮಂತ್ರಗಳಲ್ಲಿಯೂ ಹೇಳಿದೆ.

ಯಜ್ಞಕ್ಕೆ ಬೇಕಾದವುಗಳಲ್ಲಿ ಮುಖ್ಯವಾದ ಏಳು ಸಾಮಗ್ರಿಗಳಲ್ಲಿ— ಆಜ್ಯ, ಇಧ್ಮ, ಹವಿಸ್ಸುಗಳನ್ನು ಆರನೆಯ ಮಂತ್ರದಲ್ಲಿ ಹೇಳಿದೆ. ಆಜ್ಯವೆಂದರೆ ತುಪ್ಪ, ಇಧ್ಮವೆಂದರೆ ಸಮಿತ್ತು ಮತ್ತು ಹವಿಸ್ಸೆಂದರೆ ಅಗ್ನಿಯಲ್ಲಿ ಹಾಕುವ ಪುರೋಡಾಶಾದಿಗಳು. ವಸಂತಋತುವೇ ಆಜ್ಯವಾಗಿ ಭಾವಿಸಲ್ಪಟ್ಟಿತು. ಏಕೆಂದರೆ ವಸಂತಋತುವಿನಲ್ಲಿ ಪಲ್ಲವಿತ ತರುಪಲ್ಲವ ಶಾಖಾಪತ್ರ ಪುಷ್ಪಾದಿ ಗಳನ್ನು ತಿಂದು ಗೋವುಗಳು ಹೆಚ್ಚಾಗಿ ಹಾಲನ್ನು ಕೊಡುವುದರಿಂದ ಆಜ್ಯ ಎಂದರೆ ತುಪ್ಪವು ಹೆಚ್ಚಾಗಿ ದೊರೆಯುವುದು.[1] ಗ್ರೀಷ್ಮಋತುವು ಸಮಿತ್ತಾಗಿ ಭಾವಿಸಲ್ಪಟ್ಟಿತು. ಏಕೆಂದರೆ ಸಕಲ ಗುಲ್ಮತರು ಲತಾದಿಗಳು ಗ್ರೀಷ್ಮಋತು ವಿನಲ್ಲಿ ಒಣಗಿ ಚೆನ್ನಾಗಿ ಉರಿಯುವುವು.[2] ಸಮಿತ್ತೆಂದರೆ ಯಜ್ಞದಲ್ಲಿ ಆಹುತಿ

---

1. ವಸಂತರ್ತಾವಜಾವಿಕಾದಿ ಪಶೂನಾಂ ನವಪಲ್ಲವಿತ ತರುಪಲ್ಲವ ಶಾಖಾ ಪತ್ರ ಪುಷ್ಪಾದಿ ಚರ್ವಣಾತ್ ಕ್ಷೀರಬಾಹುಲ್ಯೇನಾಜ್ಯಸಮೃದ್ಧಿದರ್ಶನಾತ್ ಸ ಏವ ವಸಂತಃ ಸ್ವಸ್ಯ ಯಜ್ಞಪುರುಷಸ್ಯ ಹವಿರಾಹುತಯೇ ಆಜ್ಯರೂಪೋ ಬಭೂವೇತ್ಯರ್ಥಃ

2. ಗ್ರೀಷ್ಮರ್ತೌ ಸಕಲಗುಲ್ಮತರುಲತಾದೀನಾಂ ದ್ರವ್ಯಶೋಷಣಾದನಲ ಸ್ತತ್ಸಮಿತ್ ಸಂಸ್ಕಾರ ಮಾತ್ರೇಣೈಧತ ಇತಿಕೃತ್ವಾ ಸ ಏವ ಯಜ್ಞೇಶ್ವರ ಪ್ರೀತ್ಯೈ ಇಂಧನರಾಶಿ ರೂಪೋಽಭವದಿತ್ಯರ್ಥಃ.

ರೂಪವಾಗಿ ಹಾಕುವ ಒಣಗಿದ ಕಡ್ಡಿಗಳು; ಇನ್ನು ಶರದ್‌ಋತುವು ಹವಿಸ್ಸಾಗಿ ಭಾವಿಸಲ್ಪಟ್ಟಿತು. ಹವಿಸ್ಸೆಂದರೆ ಅನ್ನ ಅಥವಾ ಹಿಟ್ಟಿನಿಂದ ಮಾಡಿದ ಪುರೋಡಾಶವು. ಇದನ್ನು ಮಾಡುವಧಾನ್ಯವು ಶರತ್ಕಾಲದಲ್ಲಿ ಬಲಿತುಹೆಚ್ಚಾಗಿ ದೊರೆಯುತ್ತದೆ.[1]

ಸಪ್ತಾಸ್ಯಾಸನ್ ಪರಿಧಯಸ್ತ್ರಿಃ ಸಪ್ತಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಂ[2] ॥ ೧೫॥

ಪ್ರತಿಪದಾರ್ಥ—ಅಸ್ಯ-ಆ ಯಜ್ಞಕ್ಕೆ, ಸಪ್ತ-ಏಳು (ಛಂದಸ್ಸುಗಳು), ಪರಿಧಯಃ-ಪರಿಧಿಗಳು, ಆಸನ್-ಆದವು, ತ್ರಿಃಸಪ್ತ-ಇಪ್ಪತ್ತೊಂದು (ತತ್ತ್ವಗಳು) ಸಮಿಧಃ-ಸಮಿತ್ತುಗಳು, ಕೃತಾಃ-ಮಾಡಲ್ಪಟ್ಟವು. ದೇವಾಃ-ದೇವತೆಗಳು, ಯತ್-ಯಾರನ್ನು, ಯಜ್ಞಂ-ಯಜ್ಞಸಾಧನವನ್ನಾಗಿ, ತನ್ವಾನಾಃ-ಮಾಡಲಿಷ್ಟಪಟ್ಟರೋ, ಪುರುಷಂ-ಆ ಪುರುಷನನ್ನೇ, ಪಶುಂ-ಪಶುವಾಗಿ, ಅಬಧ್ನನ್-ಬಂಧಿಸಿದರು.

ಪದ್ಯಾನುವಾದ—

ಯಜ್ಞಕ್ಕೆ ಪರಿಧಿಗಳು ಸಪ್ತಛಂದಸ್ಸುಗಳು ।
ಯಜ್ಞದ ಸಮಿತ್ತುಗಳು ಮೂರೇಳು ತತ್ತ್ವಗಳು ।
ಯಜ್ಞದಾ ಯೂಪಕ್ಕೆ ದೇವತೆಗಳೆಂಬುವರ್ ।
ಯಜ್ಞಸಾಧನ ಪುರುಷಪಶುವನ್ನು ಕಟ್ಟಿದರ್ ॥

---

ಸಾಯಣಭಾಷ್ಯಧಾರ—

೧. ಶರದಿ ಶಾಲ್ಯಾದಿನವಧಾನ್ಯಾಗಮ ಪ್ರಸಿದ್ಧೇರ್ಯಜ್ವಿನೋಲೋಕೇ ಶರತ್‌ಕಾಲ ಏವ ಆಗ್ರಯಣೋಪಯೋಗಿನವೀನಧಾನ್ಯಾನ್ನೇನ. ಹವಿಷ್ಟ್ವೇನ ಹೂಯತ ಇತ್ಯರ್ಥಃ

೨. ಅಸ್ಯಸಾಂಕಲ್ಪಿಕ ಯಜ್ಞಸ್ಯ ಗಾಯತ್ರ್ಯಾದೀನಿ ಸಪ್ತಚ್ಛಂದಾಂಸಿ ಪರಿಧಯ ಆಸನ್; ಸಮಿಧಸ್ತ್ರಿಃ ಸಪ್ತತ್ರಿಗುಣೀಕೃತಸಪ್ತಸಂಖ್ಯಾಕಾ ಏಕವಿಂಶತಿಃ ಕೃತಾಃ; ಯಜ್ಞಂ ತನ್ವನಾ-ಮಾನಸಂ ಯಜ್ಞಂ ತನ್ವನಾಃ ಕುರ್ವಾಣಾಃ; ಪಶುಮಬಧ್ನನ್-ವಿರಾಟ್‌ಪುರುಷಮೇವ ಪಶುತ್ವೇನ ಭಾವಿತವಂತಃ.

ಸರಳಾನುವಾದ—ಛಂದಸ್ಸುಗಳೇಳು ಯಜ್ಞಕ್ಕೆ ಪರಿಧಿಗಳಾದವು, ಇಪ್ಪತ್ತೊಂದು ತತ್ತ್ವಗಳು ಸಮಿತ್ತುಗಳಾದವು, ವಿರಾಟ್‌ಪುರುಷನನ್ನೇ ಪಶುವನ್ನಾಗಿ ಯೂಪಸ್ತಂಭಕ್ಕೆ ದೇವತೆಗಳು ಕಟ್ಟಿ ಸಾಂಕಲ್ಪಿಕಯಜ್ಞವನ್ನು ಆಚರಿಸಿದರು.

ವಿಮರ್ಶಾತ್ಮಕ ವಿವರಣೆ—ಆರನೆಯ ಮಂತ್ರದಲ್ಲಿ ಯಜ್ಞ ಸಾಮಾಗ್ರಿಗಳಲ್ಲಿ ಕೆಲವನ್ನು ಹೇಳಿ, ಹದಿನೈದನೆಯ ಮಂತ್ರದಲ್ಲಿಯೂ ಏಳನೆಯ ಮಂತ್ರದಲ್ಲಿಯೂ ಉಳಿದ ಯಜ್ಞಸಾಮಗ್ರಿಗಳನ್ನು ಹೇಳಿದೆ. ಆದುದರಿಂದ ಹದಿನೈದನೆಯ ಮಂತ್ರವು ಆರನೆಯ ಮಂತ್ರವಾದ ಮೇಲೆ ಬರಬೇಕು. ಪುರುಷಸೂಕ್ತವಿರುವ ಇತರ ವೇದಗಳಲ್ಲಿ ಇದನ್ನು ಸರಿಪಡಿಸಿ ದಂತಿದೆ. ಅದು ಹೇಗೇ ಇರಲಿ, ವಿಮರ್ಶೆಯ ಅನುಕೂಲಕ್ಕೆ ಈ ಹದಿನೈದ ನೆಯ ಮಂತ್ರವನ್ನು ಆರನೆಯ ಮಂತ್ರವಾದ ಮೇಲೆ ಇಲ್ಲಿ ಉಲ್ಲೇಖಿಸ ಲಾಯಿತು.

ಯಜ್ಞಸಾಮಗ್ರಿಗಳಾದ ಪರಿಧಿ, ಸಮಿತ್ತು ಪಶು—ಇವು, ಈ ಸಾಂಕಲ್ಪಿಕಯಜ್ಞದಲ್ಲಿಯಾವವು?- ಎಂಬುದನ್ನು ಈ ಮಂತ್ರದಲ್ಲಿ ಹೇಳಿದೆ. ಪರಿಧಿಯೆಂದರೆ ಅಗ್ನಿಕುಂಡದ ಸುತ್ತಲೂ ಯಜ್ಞಕ್ಕೆ ವಿಘ್ನವನ್ನು ಮಾಡುವ ರಾಕ್ಷಸರನ್ನು ತಡೆಯಲು ಇಡುವ ದರ್ಭೆಗಳು. ಗಾಯತ್ರಿಯೇ ಮೊದಲಾದ ಸಪ್ತ ಛಂದಸ್ಸುಗಳೇ ಈ ಮಾನಸಿಕ ಯಜ್ಞಕ್ಕೆ ಪರಿಧಿಗಳಾಗಿ ಭಾವಿಸ ಲ್ಪಟ್ಟವು. ಇನ್ನು ಸಮಿತ್ತುಗಳೆಂದರೆ ಯಜ್ಞಕುಂಡದ ಅಗ್ನಿಯಲ್ಲಿ ಆಹುತಿ ಯಾಗಿ ಹಾಕುವ ಅಶ್ವತ್ಥಾದಿವೃಕ್ಷಗಳ ಶಾಖೆಗಳ ಒಣಗಿದ ತುದಿಗಳು. ಸಂಕಲ್ಪರೂಪವಾದ ಈ ಯಜ್ಞದಲ್ಲಿ ದಶೇಂದ್ರಿಯಗಳೂ, ಮನಸ್ಸೂ, ಪಂಚ ಭೂತಗಳೂ, ಪಂಚವಾಯುಗಳೂ ಸೇರಿ ಇಪ್ಪತ್ತೊಂದು ತತ್ತ್ವಗಳು ಸಮಿತ್ತುಗಳಾದವು. ಸಾಯಣರ ಅಭಿಪ್ರಾಯದಂತೆ ಹನ್ನೆರಡು ತಿಂಗಳುಗಳೂ ಐದು ಋತುಗಳೂ, ಮೂರು ಲೋಕಗಳೂ, ಮತ್ತು ಆದಿತ್ಯನೂ ಸೇರಿ ಇಪ್ಪತ್ತೊಂದು ಸಮಿತ್ತುಗಳಾಗುವುವು. ಇನ್ನು ಪಶುವಿಲ್ಲದೆ ಯಜ್ಞವಾಗದು. ದೇವತೆಗಳು ಪುರುಷನನ್ನೇ ಯೂಪಸ್ತಂಭದಲ್ಲಿ ಕಟ್ಟಿದಂತೆ ಭಾವಿಸಿದರೆಂದು ಈ ಮಂತ್ರದ ಅಭಿಪ್ರಾಯ.

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥

ಪ್ರತಿಪದಾರ್ಥ— ಅಗ್ರತಃ ಜಾತಂ-ಎಲ್ಲಕ್ಕೂ ಮೊದಲೇ ಹುಟ್ಟಿದ, ಯಜ್ಞಂ ತಂ ಪುರುಷಂ-ಯಜ್ಞಸಾಧನಭೂತನಾದ ಆ ವಿರಾಟ್‌ಪುರುಷನನ್ನು, ಬರ್ಹಿಷಿ-ದರ್ಭಾಸನದ ಮೇಲೆ ಸ್ಥಾಪಿಸಿ, ಪ್ರೌಕ್ಷನ್-ಪ್ರೋಕ್ಷಿಸಿದರು. ದೇವಾಃ, ಸಾಧ್ಯಾಃ, ಋಷಯಃಚ-ದೇವತೆಗಳೂ, ಸಾಧ್ಯರೂ, ಮತ್ತು ಋಷಿಗಳೂ, ಯೇ–ಯಜ್ಞಮಾಡಲು ಯಾರು ಅರ್ಹರೋ ಅವರೆಲ್ಲರೂ, ತೇನ ಆ ಪುರುಷರೂಪ ಪಶುವಿನಿಂದ, ಅಯಜಂತ–ಯಾಗಮಾಡಿದರು.

ಪದ್ಯಾನುವಾದ—

ಆವನನ ಜನಿಸಿದನೊ ಸೃಷ್ಟಿಗಂ ಪೂರ್ವದೊಳ್ ।
ಆ ವಿರಾಟ್‌ಪುರುಷನಂ ಸ್ಥಾಪಿಸುತೆ ಬರ್ಹಿಯೊಳ್ ।
ದೇವತೆಗಳುಂ ಸಾಧ್ಯರುಂ ಮತ್ತೆ ಋಷಿಗಳುಂ ।
ಭಾವಿಸಲ್ ಸಂಪ್ರೋಕ್ಷಿಸಿ ಗೈದರ್ ಯಾಗಮಂ ॥

ಸರಳಾನುವಾದ—ಸೃಷ್ಟಿಗಿಂತಲೂ ಮೊದಲೇ ಪರಮಾತ್ಮನಿಂದ ಹೊರಹೊಮ್ಮಿದ ವಿರಾಟ್‌ಪುರುಷನನ್ನೇ ದರ್ಭಾಸನದಲ್ಲಿ ಸ್ಥಾಪಿಸಿ ಸಂಪ್ರೋಕ್ಷಣೆಯನ್ನು ಮಾಡಿ ದೇವತೆಗಳೂ, ಸಾಧ್ಯರೂ ಮತ್ತು ಋಷಿಗಳೂ ಮಾನಸಿಕ ಯಾಗವನ್ನು ಮಾಡಿದರು.

ವಿಮರ್ಶಾತ್ಮಕ ವಿವರಣೆ—ಆರು ಏಳು ಮತ್ತು ಹದಿನೈದನೆಯ ಮಂತ್ರಗಳಲ್ಲಿ ದೇವತೆಗಳು ವಿರಾಟ್ ಪುರುಷನನ್ನೇ ಯಜ್ಞಪಶುವನ್ನಾಗಿ ಭಾವಿಸಿ ಮಾನಸಿಕಯಜ್ಞವನ್ನು ಮಾಡಿದುದನ್ನು ಹೇಳಿದೆಯಷ್ಟೆ. ಯಜ್ಞಕ್ಕೆ

---

ಸಾಯಣಭಾಷ್ಯಾಧಾರ—

ಅಗ್ರತಃ-ಸರ್ವಸೃಷ್ಟೇಃ ಪೂರ್ವಂ, ಪುರುಷಂ–ಪ್ರಾಗೇವೋಕ್ತಂ "ತಸ್ಮಾದ್ ವಿರಾಳಜಾಯತ ವಿರಾಜೋ ಅಧಿಪುರುಷ" ಇತಿ. ಅಯಜಂತ—ಮಾನಸಯಾಗಂ ನಿಷ್ಪಾದಿತವಂತ ಇತ್ಯರ್ಥಃ.

ಬೇಕಾದ ಸಾಮಗ್ರಿಗಳೇನು, ಎಂಬುದನ್ನು ಹೇಳಲಾಯಿತು. ಯಜ್ಞವನ್ನು ಮಾಡುವ ರೀತಿಯನ್ನು - ಈ ಮಂತ್ರಗಳ ಅರ್ಥವನ್ನು ತಿಳಿಯಲು ಅವಶ್ಯವಾಗುವಷ್ಟು ಮಾತ್ರ- ಸಂಕ್ಷೇಪವಾಗಿ ತಿಳಿಸಲಾಗುವುದು. "ಯತ್ . ಪಶುಮಾಲಭ್ಯಾಗ್ನಿಂ ಮಂಥೇತ್" ಎಂದು ಯಜುರ್ವೇದದಲ್ಲಿ ಹೇಳಿರುವುದರಿಂದ ಅಗ್ನಿಮಥನಾದಿ ಯಜ್ಞಾಂಗಕಾರ್ಯವನ್ನು ಪ್ರಾರಂಭಿಸುವ ಮೊದಲೇ ಪಶುವನ್ನು ಸಂಪಾದಿಸಿಕೊಂಡಿರಬೇಕು. ಆದುದರಿಂದ ಮೊದಲೇ ಆರನೆಯ ಮಂತ್ರದಲ್ಲಿ "ಪುರುಷೇಣ ಹವಿಷಾ ದೇವಾಯಜ್ಞಮತನ್ವತ" ಎಂದು ಪಶುವನ್ನು ಸಂಪಾದಿಸಿಕೊಂಡಿರುವುದನ್ನು ಹೇಳಿದೆ. ಪಶುವನ್ನು ಸಂಪ್ರೋಕ್ಷಣದಿಂದ ಸಂಸ್ಕರಿಸುವುದು ಅವಶ್ಯವಾದುದು; ಅದರಿಂದ "ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್" ಎಂದು ಹೇಳಿದೆ. ಯಜ್ಞವೇದಿಯಲ್ಲಿರುವ ಯೂಪಸ್ತಂಭಕ್ಕೆ ಪಶುವನ್ನು ಕಟ್ಟಿ ಮಂತ್ರಪೂರ್ವಕವಾಗಿ ನೀರಿನಿಂದ ಪ್ರೋಕ್ಷಿಸಲಾಗುವುದು. ಆಹ್ವಾನಿತರಾದ ದೇವತೆಗಳು ಕುಳಿತುಕೊಳ್ಳುವುದಕ್ಕೆಂದೂ, ಹವಿರ್ದ್ರವ್ಯಗಳನ್ನು ಇಡುವುದಕ್ಕಾಗಿಯೂ ಸಮವಾಗಿ ಕತ್ತರಿಸಿ ಮೂರು ಪದರಗಳಾಗಿ ಹಾಸಿದ ದರ್ಭೆಗಳೇ ಬರ್ಹಿಗಳು. ಪ್ರಕೃತ ಯಜ್ಞದಲ್ಲಿ ವಿರಾಟ್‌ಪುರುಷನೇ ಪಶುವಾದುದರಿಂದ ಬರ್ಹಿಯಲ್ಲಿ ಆ ಪಶುವಿಗೆ ಪ್ರೋಕ್ಷಣೆ ಮಾಡಿರುವುದನ್ನು ಹೇಳಿದೆ. ದೇವತೆಗಳೂ, ಸಾಧ್ಯರೂ, ಋಷಿಗಳೂ ಯಾಗವನ್ನು ಮಾಡಿದರು ಎಂದರೆ, ಇಂದ್ರಿಯಗಳೂ, ಪ್ರಾಣಗಳೂ ಯಜ್ಞಕಾರ್ಯವನ್ನು ಮಾಡಿದವು ಎಂದು ಹೇಳಲು ಅವಕಾಶವಿದೆ. ಹಾಗೆ ಅರ್ಥಮಾಡಿರುವುದೂ ಉಂಟು. ದೇವಾಃ ಎಂದರೆ ಇಂದ್ರಿಯಗಳು ಎಂಬ ಅರ್ಥವೂ ಆಗುತ್ತದೆ. ವಾಚಸ್ಪತಿಯಲ್ಲಿ ಹೇಳುವಂತೆ—"ಋಷತಿ ಜ್ಞಾನೇನ ಸಂಸಾರಪಾರಂ" ಎಂದರೆ ಜ್ಞಾನದ ಮೂಲಕ ಸಂಸಾರವನ್ನು ದಾಟುವ ಜ್ಞಾನಿಗಳು ಋಷಿಗಳು ಎಂದು ಅರ್ಥವಾಗುವುದು. ಋಗ್ವೇದದಲ್ಲಿ (೯-೯೬-೧೮) 'ಋಷಿಕೃತ್' ಎಂಬ ಪದಕ್ಕೆ "ಸರ್ವಸ್ಯ ದರ್ಶನ ಕರ್ತಾ" ಎಂದು ಅರ್ಥವನ್ನು ಮಾಡಿರುವುದರಿಂದ ಋಷಿ ಎಂಬ ಪದಕ್ಕೆ ಜ್ಞಾನೇಂದ್ರಿಯವೆಂದೂ ಅರ್ಥಮಾಡಲು ಬರುವುದು. "ಪ್ರಾಣಾ ವೈ ಸಾಧ್ಯಾಃ" ಎಂದು ಶತಪಥಬ್ರಾಹ್ಮಣದಲ್ಲಿ ಹೇಳಿದೆ. "ಸಾಧಯಂತೀತಿ ಸಾಧ್ಯಾಃ ಪ್ರಾಣಾಃ ಎಂದು ಅರ್ಥಮಾಡಲು ಬರುವುದು. ಪ್ರಾಣಾ ವಾ ಋಷಯಃ" ಎಂಬ

ಆಧಾರವೂ ಶತಪಥ ಬ್ರಾಹ್ಮಣದಲ್ಲಿರುವುದು. ಐದನೆಯ ಮಂತ್ರದಲ್ಲಿ ದೇವತೆಗಳು ಮೊದಲಾದವರು ಹುಟ್ಟಿದರೆಂದು ಸ್ಪಷ್ಟವಾಗಿ ಹೇಳಿಲ್ಲ. ಮುಂದಿನ ಮಂತ್ರದಲ್ಲಿ ದೇವಾಯಜ್ಞಮತನ್ವತ, ಎಂದರೆ ದೇವತೆಗಳು ಯಜ್ಞವನ್ನು ಮಾಡಿದರು ಎಂದು ಹೇಳಿರುವುದರಿಂದ ಆ ಮೊದಲೇ ದೇವತೆಗಳು ಸೃಷ್ಟಿಸಲ್ಪಟ್ಟಿದ್ದರು ಎಂದು ಭಾವಿಸಬೇಕಾಯಿತು. ಆದುದರಿಂದಸಾಯಣರು ಸಜಾತೋ ವಿರಾಟ್ ಪುರುಷೋಽತ್ಯರಿಚ್ಯತ ಎಂಬ ಭಾಗಕ್ಕೆ ಅತಿರಿಕ್ತೋಽಭೂತ್, ವಿರಾಡ್ ವ್ಯತಿರಿಕ್ತೋ ದೇವತಿರ್ಯಙ್ಮನುಷ್ಯಾದಿರೂಪೋಽಭೂತ್- ಎಂದು ಹೇಳಿ, ದೇವತೆಗಳನ್ನೂ ಆಗಹುಟ್ಟಿದ್ದವರಲ್ಲಿ ಸೇರಿಸಬೇಕಾಯಿತು. ಆದರೆ ದೇವತಿರ್ಯಙ್ಮನುಷ್ಯಾದಿಗಳು ಹುಟ್ಟಿದ್ದರೆಂದ ಮೇಲೆ ಮತ್ತೆ ಉತ್ತರ ಸೃಷ್ಟಿಯ ಅಪೇಕ್ಷೆಯೆಲ್ಲಿ ಬಂದಿತು ?

ಮೇಲೆ ಹೇಳಿದ ಸ ಜಾತೋವಿರಾಟ್ ಪುರುಷೋಽತ್ಯರಿಚ್ಯತ ಎಂಬ ಮಂತ್ರಭಾಗಕ್ಕೆ "ಅತಿರಿಕ್ತೋಽಭೂತ್" ಎಂಬ ಅರ್ಥವನ್ನೇ ಇಟ್ಟುಕೊಂಡು ಪುರುಷನು ದೇವತಿರ್ಯಙ್ಮನುಷ್ಯಾದಿ ರೂಪಗಳಲ್ಲಿ ವ್ಯಕ್ತನಾದನು ಎನ್ನುವುದಕ್ಕೆ ಬದಲು ಇಂದ್ರಿಯ ಪ್ರಾಣ ಬುದ್ಧಿಗಳಾಗಿ ರೂಪಗೊಂಡನು ಎಂದು ಅರ್ಥ ಮಾಡಲು ಸಾಧ್ಯವಾಗುತ್ತದೆ. 'ಅತ್ಯರಿಚ್ಯತ' ಎಂಬ ಪದಗಳ ಮುಂದೆ "ಪಶ್ಚಾತ್, ಭೂಮಿಂ ಅಥೋಪುರಃ" ಎಂಬ ಪದಗಳಿವೆ. ದೇವತಿರ್ಯಙ್ಮನುಷ್ಯಾದಿಗಳು ಹುಟ್ಟಿದ ಮೇಲೆ ಭೂಮಿಯೂ ಆ ಮೇಲೆ ದೇಹಗಳೂ ರೂಪಗೊಂಡವು ಎನ್ನುವುದಕ್ಕಿಂತ ಇಂದ್ರಿಯ ಪ್ರಾಣ ಬುದ್ಧಿಗಳಾದ ಮೇಲೆ ಭೂಮಿಯೂ ಆ ಮೇಲೆ ದೇಹಗಳೂ ರೂಪಗೊಂಡವು ಎನ್ನುವುದು ಹೆಚ್ಚು ಸೂಕ್ತವಾಗುತ್ತದೆ. ಮುಂಡಕಉಪನಿಷತ್ತಿನಲ್ಲಿ ಹೇಳಿರುವ ಸೃಷ್ಟಿ ಕ್ರಮವು ಈ ರೀತಿಯೇ ಇದೆ:

> ಏತಸ್ಮಾಜ್ಜಾಯತೇ ಪ್ರಾಣೋಮನಃ ಸರ್ವೇಂದ್ರಿಯಾಣಿಚ |
> ಖಂವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯಧಾರಿಣೀ ‖

ಒಂದರಿಂದ ಐದನೆಯ ಮಂತ್ರಗಳವರೆಗೆ ಪುರುಷನಿಂದ ಸೃಷ್ಟಿಯಾದ ಪೂರ್ಣಸುಂದರದೃಶ್ಯವು ನಾರಾಯಣಋಷಿಗೆ ಮೊದಲು ಆಗಿರಬೇಕು. ಅನಂತರ ಮುಂದಿನ ಹೆಚ್ಚು ವಿವರಗಳುಳ್ಳ ದರ್ಶನವು ಆಗಿದ್ದು ಇವೆರಡನ್ನೂ

ಒಟ್ಟಿಗೆ ಸೇರಿಸಿರಬೇಕು. ಆದರಿಂದ ಎರಡು ದರ್ಶನಗಳು ಸೇರುವ ಕಡೆ ಹೊಂದಿಕೊಂಡಿಲ್ಲ. ಇವೆರಡನ್ನು ಹೊಂದಿಸಬೇಕಾದರೆ ಸೃಷ್ಟಿ ಕಾರಣವಾದ ಮಾನಸಿಕ ಯಜ್ಞವು ಮನಸ್ಸೇ ಮೊದಲಾದ ಇಂದ್ರಿಯಗಳಿಂದ ಭಾವಿಸಲ್ಪಟ್ಟಿತು. ಎನ್ನುವುದು ಹೆಚ್ಚು ಸಮರ್ಪಕವೆನ್ನಬಹುದು. ತೈತ್ತಿರೀಯಾರಣ್ಯಕದಲ್ಲಿ ಪೂರ್ವ ನಾರಾಯಣ ಮತ್ತು ಉತ್ತರ ನಾರಾಯಣ ಎಂಬ ವಿಭಾಗಗಳಿವೆ. ಪೂರ್ವ ನಾರಾಯಣವೇ ಪುರುಷಸೂಕ್ತವೆಂದು ತಿಳಿಯಲ್ಪಟ್ಟಿದೆ.

ತಸ್ಮಾದ್ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಂ ।
ಪಶೂನ್‌ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚಯೇ ॥

ಪ್ರತಿಪದಾರ್ಥ ಸರ್ವಹುತಃ-ಸರ್ವಾತ್ಮಕನಾದ ವಿರಾಟ್ ಪುರುಷನನ್ನು ಆಹುತಿಯಾಗಿ ಉಳ್ಳ, ತಸ್ಮಾತ್-ಆ, ಯಜ್ಞಾತ್-ಯಜ್ಞದಿಂದ, ಪೃಷದಾಜ್ಯಂ-ಮೊಸರಿಂದ ಕೂಡಿದ ತುಪ್ಪವು, ಸಂಭೃತಂ-ಸಂಪಾದಿತವಾಯಿತು. ವಾಯವ್ಯಾನ್, ಆರಣ್ಯಾನ್. ಯೇ ಚ ಗ್ರಾಮ್ಯಾಃ- ವಾಯುವಿನಲ್ಲಿ ಹಾರುವ ಹಕ್ಕಿಗಳನ್ನೂ ಅರಣ್ಯದಲ್ಲಿಯೂ ಮತ್ತು ಗ್ರಾಮಗಳಲ್ಲಿಯೂ ವಾಸಿಸುವ ಪ್ರಾಣಿಗಳನ್ನೂ, ಚಕ್ರೇ- ಉತ್ಪನ್ನ ಮಾಡಿದನು.

ಪದ್ಯಾನುವಾದ –

ಹುಟ್ಟಿದುದು ದಧ್ಯಾಜ್ಯ ಸರ್ವಹುತ್ ಯಜ್ಞದಿಂ
ಹುಟ್ಟಿದುದು ಗಾಳಿಯೊಳ್ ಚರಿಸುವ ವಿಹಂಗಮಂ
ಹುಟ್ಟಿದುದು ಕಾಡಿನೊಳ್ ಜೀವಿಸುವ ಮೃಗಕುಲಂ
ಹುಟ್ಟಿದುದು ಹಳ್ಳಿಯೊಳ್ ಬದುಕುವಾ ಪಶುಕುಲಂ

---

ಸಾಯಣಭಾಷ್ಯಾಧಾರ –

ಸರ್ವಾತ್ಮಕಃ ಪುರುಷೋ,ಯಸ್ಮಿನ್ ಯಜ್ಞೇ ಹೂಯತೇ ಸೋಽಯಂ ಸರ್ವಹುತ್; ಪೃಷದಾಜ್ಯಂ-ದಧಿಮಿಶ್ರಮಾಜ್ಯಂ; ಸಂಭೃತಂ- ಸಂಪಾದಿತಂ.

ಸರಳಾನುವಾದ—ಸರ್ವಹುತ್ ಯಜ್ಞದಲ್ಲಿ ದಧಿಮಿಶ್ರ ಘೃತವೂ ಹಕ್ಕಿಗಳೂ, ಅರಣ್ಯಕಮೃಗಳೂ ಗ್ರಾಮ್ಯಪಶುಗಳೂ ಹುಟ್ಟಿದವು.

ತಸ್ಮಾದ್ ಋಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥೯॥

ಪ್ರತಿಪದಾರ್ಥ—ಸರ್ವಹುತಃ- ಸರ್ವಾತ್ಮಕ, ವಿರಾಟ್ ಪುರುಷನೇ ಆಹುತಿಯಾಗಿ ಉಳ್ಳ, ತಸ್ಮಾತ್-ಆ, ಯಜ್ಞಾತ್-ಯಜ್ಞದಿಂದ, ಋಚಃ- ಋಗ್ವೇದ ಮಂತ್ರಗಳೂ. ಸಾಮಾನಿ—ಸಾಮವೇದ ಮಂತ್ರಗಳೂ, ಜಜ್ಞಿರೇ- ಹುಟ್ಟಿದವು; ತಸ್ಮಾತ್—ಅದರಿಂದಲೇ, ಛಂದಾಂಸಿ-ಗಾಯತ್ರಿಯೇ ಮೊದ ಲಾದ ಛಂದಸ್ಸುಗಳೂ, ಜಜ್ಞಿರೇ-ಹುಟ್ಟಿದವು. ತಸ್ಮಾತ್-ಅದರಿಂದಲೇ, ಯಜುಃ-ಯಜುರ್ವೇದವೂ, ಅಜಾಯಾತ-ಹುಟ್ಟಿತು.

ಪದ್ಯಾನುವಾದ —

ಹುಟ್ಟಿದುದು ಸರ್ವಹುತ ಯಜ್ಞದಿಂ ಋಗ್ವೇದ ।
ಹುಟ್ಟಿದುದು ಯಜ್ಞಮದರಿಂದಲೆ ಯಜುರ್ವೇದ ।
ಹುಟ್ಟಿದುದು ಸಾಮವೇದಂ ಯಜ್ಞದಿಂದಲೇ ।
ಹುಟ್ಟಿದುದು ಛಂದಸ್ಸು ಯಜ್ಞಮದರಿಂದಲೇ ॥

ಸರಳಾನುವಾದ—ಸರ್ವಾತ್ಮಕನಾದ ವಿರಾಟನೇ ಆಹುತಿಯಾದಂತಹ ಯಜ್ಞದಿಂದ ಋಗ್ ಯಜುಸ್ಸಾಮವೇದಗಳೂ ಛಂದಸ್ಸೂ ಹುಟ್ಟಿದವು.

---

ಸಾಯಣಭಾಷ್ಯಧಾರ—

ಸರ್ವಹುತಃ ತಸ್ಮಾತ್-ಪೂರ್ವೋಕ್ತಾತ್ ಯಜ್ಞಾತ್, ಋಚಃ ಸಾಮಾನಿ, ಜಜ್ಞಿರೇ- ಉತ್ಪನ್ನಾಃ ; ಛಂದಾಂಸಿ ತಸ್ಮಾತ್ ಯಜ್ಞಾತ್ ಗಾಯತ್ರ್ಯಾದೀನಿ ಜಜ್ಞಿರೇ.

**ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।**
**ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ ॥೧೦॥**

**ಪ್ರತಿಪದಾರ್ಥ**—ತಸ್ಮಾತ್-ಹಿಂದೆ ಹೇಳಿದ ಯಜ್ಞದಿಂದ, ಅಶ್ವಾಃ-ಕುದುರೆಗಳು, ಅಜಾಯಂತ-ಹುಟ್ಟಿದವು. ಚ ಮತ್ತು, ಉಭಯಾದತಃ-ಎರಡು ಸಾಲು ಹಲ್ಲುಗಳುಳ್ಳ, ಯೇಕೇ-ಯಾವ ಪ್ರಾಣಿಗಳಿರುವುವೋ ಅವೂ, ಉತ್ಪನ್ನವಾದವು. ತಸ್ಮಾತ್-ಆ ಯಜ್ಞದಿಂದ- ಗಾವೋಹ-ಗೋವುಗಳೂ, ಜಜ್ಞಿರೇ-ಹುಟ್ಟಿದವು. ತಸ್ಮಾತ್, ಅದರಿಂದಲೇ, ಅಜಾವಯಃ- ಆಡು ಕುರಿಯ ಜಾತಿಯ ಪ್ರಾಣಿಗಳು, ಜಾತಾಃ-ಹುಟ್ಟಿದವು.

**ಪದ್ಯಾನುವಾದ**—

ಅದರಿಂದ ಉತ್ಪನ್ನವಾದವಾ ಕುದುರೆಗಳು ।
ಮೊದಲಾದೆರಡು ಸಾಲು ಹಲ್ಲಿನ ಪ್ರಾಣಿಗಳು ।
ಅದರಿಂದಲೇ ಮತ್ತೆ ಹುಟ್ಟಿದವು ಗೋವುಗಳು ।
ಅದರಿಂದ ಹುಟ್ಟಿದವು ಅಜಜಾತಿ ಜಂತುಗಳು ॥

**ಸರಳಾನುವಾದ**— ಹಿಂದೆ ಹೇಳಿದ ಯಜ್ಞದಿಂದಲೇ ಅಶ್ವಗಳೇ ಮೊದಲಾದ ಎರಡು ಸಾಲು ಹಲ್ಲಿನ ಪ್ರಾಣಿಗಳೂ ಗೋವುಗಳೂ ಮತ್ತು ಅಜಜಾತಿ ಜಂತುಗಳೂ ಹುಟ್ಟಿದವು.

**ವಿಮರ್ಶಾತ್ಮಕ ವಿವರಣೆ** ೮, ೯ ಮತ್ತು ೧೦ ನೆಯ ಮಂತ್ರಗಳಲ್ಲಿ ದಧಿಘೃತವೂ ಮೂರು ವೇದಗಳೂ, ಛಂದಸ್ಸೂ, ಪಕ್ಷಿಗಳೂ, ಕಾಡಿನಮೃಗಗಳೂ ಊರಿನ ಪಶುಗಳೂ, ಕುದುರೆಗಳು ಮೊದಲಾದ ಪ್ರಾಣಿಗಳೂ ಯಜ್ಞದಿಂದ ಹುಟ್ಟಿದುದಾಗಿ ಹೇಳಿದೆ. ಮುಂಡಕೋಪನಿಷತ್ತಿನಲ್ಲಿ 'ಅಕ್ಷರಾತ್ ಪರತಃ ಪರಃ' ಎಂದು ವರ್ಣಿಸಲ್ಪಟ್ಟಿರುವ ಪರಬ್ರಹ್ಮದಿಂದ ಸೃಷ್ಟಿಯಾದುದನ್ನು ಹೀಗೆಯೇ ಹೇಳಿದೆ.

---

**ಸಾಯಣಭಾಷ್ಯದಾರ**—

ತಸ್ಮಾತ್-ಪೂರ್ವೋಕ್ತಾತ್ ಯಜ್ಞಾತ್ ಅಶ್ವಾ, ಅಜಾಯಂತ-ಉತ್ಪನ್ನಾಃ; ಉಭಯೋದತಃ ಊರ್ಧ್ವಾಧೋಭಾಗಯೋಃ ಉಭಯೋಃ ದಂತಯುಕ್ತಾಃ

ಪರಮಾತ್ಮನಿಂದ ಪ್ರಾಣ ಮನಸ್ಸು ಸರ್ವೇಂದ್ರಿಯಗಳೂ ಪಂಚ ಭೂತಗಳೂ ಪೃಥ್ವಿಯೂ, ವೇದಗಳೂ ಲೋಕಗಳೂ ಸೂರ್ಯ ಚಂದ್ರರೂ ಮೊದಲಾದವು ಹುಟ್ಟಿದವೆಂದು ಹೇಳಿ ದೇವತಿರ್ಯಙ್ಮನುಷ್ಯಾದಿಗಳು ಹುಟ್ಟಿದುದನ್ನು ಮುಂಡಕೋಪನಿಷತ್ತಿನಲ್ಲಿ 1 ಹೇಳುತ್ತದೆಂಬುದು ಏಳನೆಯಮಂತ್ರದ ವಿಮರ್ಶಾತ್ಮಕ ವಿವರಣೆಯೊಡನೆ ತುಲನಾರ್ಹವಾದುದಾಗಿದೆ. ಪುರುಷಸೂಕ್ತದಲ್ಲಿಯೂ ಮುಂಡಕೋಪನಿಷತ್ತಿನಲ್ಲಿಯೂ ಋಗ್ ಯಜುಸ್ಸಾಮವೇದಗಳು ಹುಟ್ಟಿದುದನ್ನು ಹೇಳಿದಿಯೇ ಹೊರತು ಅಥರ್ವವೇದವು ಹುಟ್ಟಿದುದನ್ನು ಹೇಳಿಲ್ಲ. ಇದು ಏಕೆ?. ಎಂಬುದು ವಿಚಾರಾರ್ಹವಾದುದು. ಪುರುಷ ಸೂಕ್ತದಲ್ಲಿ ಹೇಳಲ್ಪಟ್ಟಿರುವ ಮಾನಸಿಕ ಯಜ್ಞವು, ಕಾರ್ಯತಃ ನಡೆವ ಯಜ್ಞದ ಕ್ರಮದಲ್ಲಿಯೇ ಹೇಳಲ್ಪಟ್ಟಿರುವುದರಿಂದ ಯಜ್ಞವು ಹೇಗೆ ನಡೆಯುತ್ತಿತ್ತೆಂಬ ಚಿತ್ರವು ಮನಸ್ಸಿನ ಮುಂದಿರುವುದು ಆವಶ್ಯವಾಗಿದೆ. ೧೯೬೮ನೆಯ ಇಸವಿಯ ಸೆಪ್ಟೆಂಬರ್ ತಿಂಗಳ "ಕಸ್ತೂರಿ" ಮಾಸಿಕದಲ್ಲಿ ಉಕ್ತವಾಗಿರುವ ಅಶ್ವಮೇಧ ಯಜ್ಞದ ಚಿತ್ರದ ಸ್ವಲ್ಪ ಭಾಗವನ್ನಿಲ್ಲಿ ಕಾಣಿಸಲಾಗುವುದು:

"ಇನ್ನು ಕೊನೆಯ ಘಟ್ಟವು ಪ್ರಾರಂಭವಾಗುತ್ತದೆ. ಯಜ್ಞಾಶ್ವವೂ ಒಂದು ಕಾಡು ಹೋರಿಯೂ ಯಜ್ಞವೇದಿಕೆಯ ಬಳಿ ಯೂಪ (ಗೂಟ) ಗಳಿಗೆ ಕಟ್ಟಲ್ಪಡುತ್ತವೆ; ಇತರ ೨೧ ಯೂಪಗಳಿಗೆ ೩೨೭ ಸಾಧುಪಶುಗಳನ್ನೂ,

---

1. ಏತಸ್ಮಾಜ್ಜಾಯತೇ ಪ್ರಾಣೋಮನಃ ಸರ್ವೇಂದ್ರಿಯಾಣಿ ಚ।
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯಧಾರಿಣೀ ॥
ತಸ್ಮಾದೃಚಃ ಸಾಮಯಜೂಂಷಿ ದೀಕ್ಷಾ
ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।
ಸಂವತ್ಸರಶ್ಚ ಯಜಮಾನಶ್ಚ ಲೋಕಾಃ
ಸೋಮೋ ಯತ್ರಪವತೇ ಯತ್ರ ಸೂರ್ಯಃ ॥
ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ
ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।
ಪ್ರಾಣಾಪಾನೌ ವ್ರೀಹಿಯವೌ ತಪಶ್ಚ
ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥

ಅವುಗಳ ನಡುನಡುವೆ ೨೮೨ ಕಾಡುಪಶುಗಳನ್ನೂ ಬಿಗಿಯಬೇಕು; ಸಾಧು ಪಶುಗಳಲ್ಲಿ ಗೋವು, ಆಡು, ಹೋರಿ, ಒಂಟೆ ಮೊದಲಾದವು ಇರುತ್ತಿದ್ದರೆ, ಕಾಡು ಪ್ರಾಣಿಗಳಲ್ಲಿ ಆನೆ ಸಿಂಹ ಹುಲಿ ಮೊದಲಾದವು ಇರುತ್ತಿದ್ದವು.... ಕುದುರೆ ಪ್ರಜಾಪತಿಗೆ ಆಹುತಿಯಾಗುತ್ತದೆ. ಇತರ ದೇವತೆಗಳಿಗೆ ಇತರ ಪ್ರಾಣಿಗಳು ಆಹುತಿಯಾಗುತ್ತಿದ್ದವು....ಬಲಿ ಕೊಡುತ್ತಿದ್ದುದು, ಕುದುರೆ ಮೊದಲಾದ ಸಾಕು ಪ್ರಾಣಿಗಳನ್ನು ಮಾತ್ರ. ಅರಣ್ಯದ ಪಶುಗಳನ್ನು ಯಜ್ಞಾಂತ್ಯದಲ್ಲಿ ಬಿಡುಗಡೆ ಮಾಡುತ್ತಿದ್ದರು. ರಾಣಿಯರು ಅಲಂಕರಿಸಿ ರಾಜನು ಕೊನೆಯ ಕವಳ ಕೊಟ್ಟು ಆದರಿಸಿದ ಮೇಲೆ ಕುದುರೆಯನ್ನು ವಧಿಸುತ್ತಿದ್ದರು... ಯಜುರ್ವೇದದಲ್ಲಿ ಆ ರಾತ್ರಿಯನ್ನು ಪಟ್ಟ ಮಹಿಷಿಯು ಆ ಸತ್ತ ಯಜ್ಞಪಶುವಿನ ಸಂಗಡ ಕಳೆಯಬೇಕೆಂದೂ, ಅದರಿಂದ ಅವಳು ಪುತ್ರವತಿಯಾಗುವಳೆಂದೂ ಹೇಳಿವೆ; ಆದರೆ ಮುಂದೆ ಈ ರೂಢಿ ತ್ಯಜಿಸಲ್ಪಟ್ಟಂತೆ ತೋರುತ್ತದೆ.

ಹಿಂಸಾತ್ಮಕ ಯಜ್ಞಗಳನ್ನು ಮಾಡುವುದರ ಔಚಿತ್ಯ ವಿಷಯವಾಗಿ ಪ್ರಾಜ್ಞರಾದ ಆರ್ಯರಲ್ಲೇ ಭಿನ್ನಾಭಿಪ್ರಾಯಗಳು ಬಂದುದರಲ್ಲಿ ಆಶ್ಚರ್ಯವಿಲ್ಲ.

ಪಶುಶ್ಚೇನ್ನಿಹತಸ್ಸ್ವರ್ಗಂ ಜ್ಯೋತಿಷ್ಟೋಮೇ ಗಮಿಷ್ಯತಿ ।
ಸ್ವಪಿತಾ ಯಜಮಾನೇನ ತತ್ರ ಕಸ್ಮಾನ್ನ ಹಿಂಸ್ಯತೇ ॥

ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ ಕೊಲ್ಲಲ್ಪಡುವ ಪಶುಗಳು ಸ್ವರ್ಗಕ್ಕೆ ಹೋಗುವುದಾದರೆ ಯಜಮಾನನು ಯಜ್ಞದಲ್ಲಿ ಅವನ ತಂದೆಯನ್ನೇ ಕೊಂದು ಸ್ವರ್ಗಕ್ಕೆ ಏಕೆ ಕಳುಹಿಸಬಾರದೆಂಬ ಆಕ್ಷೇಪ ಕೇಳಿಬಂದಿರಬೇಕು. ಕೆಲವರು "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಎಂಬ ಆಧಾರವನ್ನು ಎತ್ತಿ ಹಿಡಿದರೆ "ಮಾಹಿಂಸ್ಯಾತ್" ಎಂಬ ವಿಧಿಯನ್ನು ಇತರರು ಅವರ ಮುಂದೆ ಇಡುತ್ತಿದ್ದರು. ಪ್ರಾಜ್ಞರಾದ ಆರ್ಯರು ಒಂದೇ ಬಾರಿಗೆ ಮೊದಲಿಂದ ಬಂದಿದ್ದ ಪದ್ಧತಿಯನ್ನು ತಪ್ಪಿಸಿ ಕ್ರಾಂತಿಗಳಿಗವಕಾಶಕೊಡದೆ ಯಜ್ಞಯಾಗಾದಿಗಳಿಂದ ಫಲವು ದೊರೆವುದಾದರೂ ಅದುಅಶಾಶ್ವತವಾದುದು,

ಜ್ಞಾನಯಜ್ಞ ದ್ರವ್ಯ ಯಜ್ಞ ತಪೋಯಜ್ಞ ಮೊದಲಾದವು ಶ್ರೇಷ್ಠವಾದವು-ಎಂದುಹೇಳಿ, ಸುಲಭವಾಗಿ ಹಿಂಸಾತ್ಮಕಯಜ್ಞಗಳಲ್ಲಿ ಶ್ರದ್ಧೆಯು ಹೋಗುವಂತೆ ಮಾಡಿದರು. ವೇದಗಳ ಕಾಲದಲ್ಲಿಯೇ ಈ ಮಾರ್ಪಾಡು ಪ್ರಾರಂಭವಾಗಿರುವುದು ಪುರುಷಸೂಕ್ತದಲ್ಲಿ ಮಾನಸಿಕ ಯಜ್ಞವನ್ನು ಹೇಳಿರುವುದರಿಂದಲೇ ತಿಳಿದು ಬರುತ್ತದೆ. ಆದರೂ, ವಸುವೆಂಬರಾಜನು ಈ ವಿವಾದವನ್ನು ಪರಿಹರಿಸಿದುದಾಗಿ ಮಹಾಭಾರತದಲ್ಲಿ ಹೇಳಿದೆ.

ಹಿಂಸಾತ್ಮಕ ಯಜ್ಞಯಾಗಾದಿಗಳಲ್ಲಿ ಶ್ರದ್ಧೆಯಿದ್ದ ತ್ರೈವಿದ್ಯರೆನಿಸಿದ್ದ ಮೀಮಾಂಸಕರು ಈತರಹದ ಬದಲಾವಣೆಗೆ ಸುಲಭವಾಗಿ ಒಪ್ಪಲಿಲ್ಲ. ಮಹಾಮಹೋಪಾಧ್ಯಾಯ ಪಂಡಿತ ರತ್ನಂ ಶ್ರೀನಿವಾಸಾಚಾರ್ಯರು ಬರೆದಿರುವ ಹಿಂದೂ ದರ್ಶನಸಾರದ ೧೭೩ ನೆಯ ಪುಟದಲ್ಲಿ ಹೇಳಿರುವಂತೆ—"ಪೂರ್ವಕಾಲದಲ್ಲಿ ವೈದಿಕ ಮತವೂ ಔಪನಿಷದಮತವೂ ಸ್ವತಂತ್ರಗಳಾಗಿ ಶುದ್ಧವಾಗಿ ಮಿಶ್ರವಿಲ್ಲದೆ ಇದ್ದವು." ಆಗ ಪರಸ್ಪರನಿಂದಾವಾದಗಳು ಬಹಳವಾಗಿದ್ದವು. ವೇದವಾದರತರು ಕುರುಡರಾಗಿ ಮೂಢರಾಗಿ ಕಾಮಪರವಶರಾಗಿ ಸ್ವರ್ಗಕ್ಕಿಂತಲೂ ಬೇರೆ ಪುರುಷಾರ್ಥವಿಲ್ಲವೆಂದು ವಾದಿಸುತ್ತ ಮೋಕ್ಷವನ್ನು ನಿಂದಿಸುತ್ತನಾಸ್ತಿಕರಾಗಿರುತ್ತಾರೆಂದು ಉಪನಿಷತ್ತು ಭಗವದ್ಗೀತಾದಿ ಗ್ರಂಥಗಳಲ್ಲಿ ತ್ರಯೀಧರ್ಮವೆಂಬ ಶುದ್ಧವೈದಿಕಮತವನ್ನು ನಿಂದಿಸಿರುತ್ತದೆ 1 ಉಪನಿಷತ್ತುಗಳಿಲ್ಲ ಕಟ್ಟುಕಥೆಗಳು ಅವುಗಳಿಗೆಅರ್ಥವೇ ಇಲ್ಲವೆಂದು ಶುದ್ಧವಾದ ಔಪನಿಷದ ಮತವನ್ನು ಪ್ರಾಚೀನಮೀಮಾಂಸಕರು ನಿಂದಿಸುತ್ತಿದ್ದರು. "ವೇದೋಷರಾವೇದಾಂತಾಃ" ವೇದಾಂತಗಳುಬಂಜರು ಭೂಮಿಗಳೆಂದರ್ಥ"

---

1. (i) ಪ್ಲವಾಹ್ಯೇತೇ ದೃಢಾಯಜ್ಞರೂಪಾಃ
(ii) ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ
ವೇದವಾದ ರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ
ಕಾಮಾತ್ಮಾನಃ ಸ್ವರ್ಗಪರಾ ಜನ್ಮ ಕರ್ಮ ಫಲ ಪ್ರದಾಂ
ಕ್ರಿಯಾ ವಿಶೇಷ ಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ
(iii) ತ್ರೈಗುಣ್ಯ ವಿಷಯಾವೇದ ನಿಸ್ತ್ರೈಗುಣ್ಯೋಭವಾರ್ಜುನ

ಅದೇ ಗ್ರಂಥದ ೧೫೭ ನೆಯ ಪುಟದಲ್ಲಿ ಮೀಮಾಂಸಾದರ್ಶನ ವಿಷಯದಲ್ಲಿ ಹೀಗೆ ಹೇಳಿವೆ: "ವೇದವು ಋಗ್ವೇದ ಯಜುರ್ವೇದ, ಸಾಮವೇದ ಎಂದು ಮೂರು ವಿಧ; ಮೂರಕ್ಕೂ ಸೇರಿ ತ್ರಯೀ ಎಂದು ಹೆಸರು. ಯಾಗಕ್ಕೆ ಈ ಮೂರು ವೇದಗಳೇಬೇಕಾಗಿರುವುದು; ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ; ಅದರಲ್ಲಿ ಶಾಂತಿ, ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ. ಆದುದರಿಂದ ಮೂರು ವೇದಕ್ಕೆ ಸಮಾನವಾದುದಲ್ಲವೆಂಬ ಅಭಿಪ್ರಾಯವನ್ನು ಕುಮಾರಿಲರು ಮೊದಲಾದವರು ಸೂಚಿಸುತ್ತಾರೆ." ಯಜ್ಞಯಾಗಾದಿಗಳನ್ನು ಹೇಳುವ ಬ್ರಾಹ್ಮಣವೂ ಆ ಯಜ್ಞವನ್ನು ಮಾಡುವಾಗ ಹೇಳಲು ಉಪಯೋಗವಾಗುವ ಮಂತ್ರಗಳೂ ಮಾತ್ರವೇ ವೇದವೆಂಬ ಅಭಿಪ್ರಾಯವಿದ್ದಿತು. "ಮಂತ್ರಬ್ರಾಹ್ಮಣಯೋರ್ವೇದ ನಾಮಧೇಯಂ" ಎಂಬ ಆಧಾರವಿದೆ. ಪಶುಯಜ್ಞದ ಪ್ರಾಶಸ್ತ್ಯವು ಹೋಗಿ ತ್ರೈವಿದ್ಯರ ಪ್ರಭಾವವು ಕಡಮೆಯಾದಂತೆ ಉಪನಿಷತ್ತುಗಳಿಗೂ ಅಥರ್ವವೇದಕ್ಕೂ ಮಾನ್ಯತೆ ಬಂದಿತು. ಇದರಿಂದ ಋಗ್ವೇದ ಯಜುರ್ವೇದ ಸಾಮವೇದಗಳು ದೇವತೆಗಳು ಮಾಡಿದ ಯಜ್ಞದಿಂದ ಹುಟ್ಟಿದವೆಂದು ಹೇಳಲ್ಪಟ್ಟಿದ್ದರೂ ಅಥರ್ವವೇದವು ಅದರಿಂದ ಹುಟ್ಟಿದುದೆಂದು ಹೇಳಿಲ್ಲ.

**ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ‌। ‌**
**ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥೧೧॥**

**ಪ್ರತಿಪದಾರ್ಥ**— ಯತ್-ಯಾವಾಗ, ಪುರುಷಂ-ವಿರಾಟ್ ಪುರುಷನನ್ನು, ವ್ಯದಧುಃ-ಯಜ್ಞಾಹುತಿಯನ್ನಾಗಿ ಸಂಕಲ್ಪ ಮಾಡಿದರೋ ಆಗ ಕತಿಧಾ-ಎಷ್ಟು ಪ್ರಕಾರವಾಗಿ, ವ್ಯಕಲ್ಪಯನ್-ಅವನನ್ನು ವಿಭಾಗಿಸಿದರು? ಅಸ್ಯಮುಖಂ ಕಿಂ-ಅವನ ಮುಖವು ಯಾವುದು ಎಂದೂ, ಅಸ್ಯ ಬಾಹೂಕಾ-ಅವನ ಬಾಹುಗಳು ಯಾವವು? ಎಂದೂ, ಊರೂ ಪಾದಾಕಾ-ತೊಡೆ ಪಾದಗಳು ಯಾವವು ಎಂದೂ, ಉಚ್ಯೇತೇ-ಹೇಳಲ್ಪಡುತ್ತವೆ.

---

**ಸಾಯಣಭಾಷ್ಯಾಧಾರ**—

ಯತ್-ಯದಾ, ಪುರುಷಂ-ವಿರಾಡ್ರೂಪಂ, ವ್ಯದಧುಃ-ಸಂಕಲ್ಪೇನ ಉತ್ಪಾದಿತವಂತಃ ತದಾನೀಂ ಕತಿಧಾ-ಕತಿಭಿಃ ಪ್ರಕಾರೈಃ; ವ್ಯಕಲ್ಪಯನ್-ವಿವಿಧಂ ಕಲ್ಪಿತವಂತಃ

ಪದ್ಯಾನುವಾದ—

ಅವತೆರದಿಂ ವಿಭಾಗಿಸಿದರಾ ಪುರುಷನಂ ।
ಆವುದೆಂದೆಂಬರ್ ಪರಮಪುರುಷನ ಮುಖಮುಂ ।
ಅವುದೆಂದೆಂಬರಾ ಪುರುಷನ ಭುಜಂಗಳಂ ।
ಆವುವೆಂಬರವನಾ ತೊಡೆಗಳಂ ಪದಗಳಂ ॥

ಸರಳಾನುವಾದ—ವಿರಾಟ್ ಪುರುಷನನ್ನು ಯಾಜ್ಞಾಹುತಿಯನ್ನಾಗಿ ಮಾಡಿದಾಗ ಎಷ್ಟು ಪ್ರಕಾರವಾಗಿ ಅವನನ್ನು ವಿಭಾಗಿಸಿದರು? ಅವನ ಮುಖವು ಯಾವುದೆಂದು ಕರೆಯಲ್ಪಟ್ಟಿತು? ಅವನ ಬಾಹುಗಳೂ ತೊಡೆಗಳೂ ಪಾದಗಳೂ ಯಾವುಯಾವುವೆಂದು ಕರೆಯಲ್ಪಟ್ಟವು?

ಬ್ರಾಹ್ಮಣೋऽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ॥೧೨॥

ಪ್ರತಿಪದಾರ್ಥ—ಅಸ್ಯಮುಖಂ-ಈ ಪುರುಷನ ಮುಖವಾಗಿ, ಬ್ರಾಹ್ಮಣಃ-ಬ್ರಾಹ್ಮಣನು, ಆಸೀತ್-ಆದನು, ಬಾಹೂ-ಬಾಹುಗಳು, ರಾಜನ್ಯಃ-ಕ್ಷತ್ರಿಯರಾಗಿ, ಕೃತಃ-ಮಾಡಲ್ಪಟ್ಟವು. ತತ್-ಆಗ, ಅಸ್ಯ-ಅವನ, ಊರೂ-ತೊಡೆಗಳು. ವೈಶ್ಯಃ-ವೈಶ್ಯರಾದವು. ಪದ್ಭ್ಯಾಂ-ಪಾದಗಳಿಂದ, ಶೂದ್ರಃ-ಶೂದ್ರನು, ಅಜಾಯತ-ಹುಟ್ಟಿದನು.

ಪದ್ಯಾನುವಾದ—

ಪುರುಷನಾ ವದನದಿಂ ಬ್ರಾಹ್ಮಣರ್ ಜನಿಸಿದರ್ ।
ಪುರುಷನಾ ಭುಜಗಳಿಂ ಕ್ಷತ್ರಿಯರ್ ಜನಿಸಿದರ್ ।
ಪುರುಷನಾ ತೊಡೆಗಳಿಂ ವೈಶ್ಯಜನರುದಿಸಿದರ್ ।
ಪುರುಷನಾ ಪದಗಳಿಂ ಶೂದ್ರಜನರುದಿಸಿದರ್ ॥

---

ಸಾಯಣಭಾಷ್ಯಾಧಾರ—

ಮುಖಮಾಸೀತ್-ಮುಖಾದುತ್ಪನ್ನ ಇತ್ಯರ್ಥಃ; ಬಾಹೂ ಕೃತಃ-ಬಾಹುತ್ವೇನ ನಿಷ್ಪಾದಿತಃ ಬಾಹುಭ್ಯಾಂ ಉತ್ಪಾದಿತ ಇತ್ಯರ್ಥಃ.

**ಸರಳಾನುವಾದ**—ಯಜ್ಞದ ಪಶುವಾದ ವಿರಾಟ್ ಪುರುಷನ ಮುಖದಿಂದ ಬ್ರಾಹ್ಮಣರೂ, ಭುಜಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ ಪಾದಗಳಿಂದ ಶೂದ್ರರೂ ಹುಟ್ಟಿದರು.

**ವಿಮರ್ಶಾತ್ಮಕ ವಿವರಣೆ**—11 ನೇ ಮಂತ್ರದಲ್ಲಿನ ಪ್ರಶ್ನೆಗಳಿಗೆ ಉತ್ತರವು 12 ನೇ ಮಂತ್ರದಲ್ಲಿದೆ. ವಿರಾಟ್‌ಪುರುಷನನ್ನು ಯಜ್ಞಾಹುತಿಯನ್ನಾಗಿ ಮಾಡಿದಾಗ ಎಷ್ಟು ಪ್ರಕಾರವಾಗಿ ಅವನನ್ನು ವಿಭಾಗಿಸಿದರು? ಅವನ ತೊಡೆಗಳು ಮತ್ತು ಪಾದಗಳು ಯಾವವು? ಎಂಬ ಈ ಪ್ರಶ್ನೆಗಳಿಗೆಉತ್ತರವಾಗಿ 12ನೇಮಂತ್ರದಲ್ಲಿ ಬ್ರಾಹ್ಮಣನೇ ಅವನ ಮುಖವಾದನು; ಅವನ ಬಾಹುಗಳು ಕ್ಷತ್ರಿಯರಾಗಿ, ಅವನ ತೊಡೆಗಳು ವೈಶ್ಯರಾಗಿ ಮಾಡಲ್ಪಟ್ಟವು—ಎಂದು ಉತ್ತರ ಹೇಳಿರುವುದರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಮುಖ ಬಾಹು ತೊಡೆಗಳಾಗಿ ಭಾವಿಸಲ್ಪಟ್ಟರು ಎಂಬ ಅರ್ಥ ಬರುವುದೇ ಹೊರತು, ಅವರು ಆ ಅಂಗಗಳಲ್ಲಿ ಹುಟ್ಟಿದರು ಎಂಬ ಭಾವನೆಯು ಬರುವುದಿಲ್ಲ. "ಕೌ ಪಾದಾ" ಎಂದರೆ ಪುರುಷನ ಪಾದಗಳಾವವು. ಎಂಬ ಪ್ರಶ್ನೆಗೆ ಶೂದ್ರನೇ ಅವನ ಪಾದಗಳೆಂಬ ಉತ್ತರವು ನಿರೀಕ್ಷಿಸಿಸಲ್ಪಡುವುದು; ಆದರೆ ಪದ್ಭ್ಯಾಂ ಶೂದ್ರೋ ಅಜಾಯತ ಎಂದರೆ ಪಾದಗಳಿಂದ ಶೂದ್ರನು ಹುಟ್ಟಿದನು ಎಂದು ಹೇಳಿರುವುದರಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಬ್ರಹ್ಮನ ಆಯಾ ಅಂಗಗಳಿಂದ ಜನಿಸಿದರು ಎಂದು ಅರ್ಥ ಮಾಡಬೇಕಾಗುವುದು. ಇದರಿಂದ ಬ್ರಾಹ್ಮಣ ಜಾತಿಯವರಲ್ಲದವರು ತಮ್ಮ ತಮ್ಮ ವಿಷಯದಲ್ಲಿ ಪುರುಷಸೂಕ್ತವು ತಾರತಮ್ಯವನ್ನು ತೋರಿಸಿದೆಯೆಂದು ಭಾವಿಸುವುದುಂಟು; ಇದಕ್ಕೆ ಕಾರಣವಿಲ್ಲ. ಪರಬ್ರಹ್ಮನ ಶರೀರದಿಂದ ಹೊರಹೊಮ್ಮಿದವರ ವಿಷಯದಲ್ಲಿ ಹೇಳಿದ ಈ ಮಾತು ಸ್ತ್ರೀಯರ ಯೋನಿಯಲ್ಲಿ ಹುಟ್ಟಿದವರಿಗೆ ಅನ್ವಯಿಸುವುದಿಲ್ಲ. ಅರ್ಥಾತ್ ಮೊದಲು ಬ್ರಾಹ್ಮಣನಾಗಿ ಹುಟ್ಟಿದವನ ಹೊಟ್ಟೆಯಲ್ಲಿ ಬ್ರಾಹ್ಮಣನೇ ಹುಟ್ಟುವನೆಂದು ಪುರುಷಸೂಕ್ತದಲ್ಲಿ ಹೇಳಿಲ್ಲ. ಪರಬ್ರಹ್ಮನ ಮುಖದಿಂದ ಹುಟ್ಟಿದವರು ಬ್ರಹ್ಮಜ್ಞಾನಿಗಳೇ ಆಗಿರಬೇಕು, ಬಾಹುವಿನಿಂದ ಹುಟ್ಟಿದವರು ಕ್ಷತ್ರಿಯಗುಣವುಳ್ಳವರೇ ಆಗಿರಬೇಕು—ಎಂಬುದರಲ್ಲಿ ತಾರತಮ್ಯವೇನಿದೆ? ಆದರೆ, ಕ್ಷತ್ರಿಯಯೋನಿಯಲ್ಲಿ ನಿರ್ಬಲನಾದವನು ಹುಟ್ಟಬಾರದೇನು? ಜನಕ, ಜೈವಲಿ, ಚಿತ್ರಗಾರ್ಗ್ಯಾಯ ರಾಜರೇ

ಮೊದಲಾದವರು ಬ್ರಹ್ಮಜ್ಞಾನಿಗಳಲ್ಲವೆ? "ನ ಪ್ರಾಕ್ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ ಗಚ್ಛತಿ, ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂತ್" ನಿನಗಿಂತಲೂ ಹಿಂದೆ ಬ್ರಹ್ಮವಿದ್ಯೆಯು ಬ್ರಾಹ್ಮಣ ರನ್ನು ಸೇರಿರಲಿಲ್ಲ ಮತ್ತು ಅದರಿಂದ ಸರ್ವಲೋಕಗಳಲ್ಲಿಯೂ ಕ್ಷತ್ರಕ್ಕೆ ಪ್ರಶಾಸ ನವು ಇತ್ತು- ಎಂದು ಜೈವಲಿ ರಾಜನು ಶಿಷ್ಯನಾಗಿ ಬಂದ ಬ್ರಾಹ್ಮಣನಾದ ಅರುಣಿಗೆ ಹೇಳಿದನೆಂದು ಛಾಂದೋಗ್ಯ ಉಪನಿಷತ್ತಿನಲ್ಲಿ (೫-೩-೭) ಹೇಳಿದೆ. "ಕ್ಷತ್ರಿಯ ಪರಂಪರಯೈವ ಇಯಂ ವಿದ್ಯಾ ಏತಾವಂತಂ ಕಾಲಂ ಆಗತಾ" ಎಂದರೆ ಕ್ಷತ್ರಿಯ ಪರಂಪರೆಯಿಂದಲೇ ಈವಿದ್ಯೆಯು ಇಷ್ಟು ಕಾಲವು ಬಂದಿದ್ದಿತು- ಎಂದು ಈ ಮಂತ್ರದ ಶಾಂಕರ ಭಾಷ್ಯದಲ್ಲಿ ಹೇಳಿದೆ. ಶ್ರೀಕೃಷ್ಣನ ವಾಕ್ಯದಲ್ಲಿ ಎಲ್ಲಿಯೂ ಗೀತೆಯಲ್ಲಿ ಜಾತಿ ಎಂಬ ಪದದ ಪ್ರಯೋಗ ವಿಲ್ಲ. ವರ್ಣವ್ಯವಸ್ಥೆಯನ್ನು ಹೇಳುವಾಗ ಸ್ವಭಾವಜನ್ಯ ಎಂಬ ಪದ ವಿರುವುದು ಕಂಡು ಬರುತ್ತದೆ. ಅವನವನ ಸ್ವಭಾವಕ್ಕನುಸರಿಸಿ ಅವನಿಗೆ ತಕ್ಕ ಕರ್ಮಗಳು ನಿಷ್ಕರಿಸಲ್ಪಟ್ಟಿವೆ. ಟಿಲಕರ ಗೀತಾರಹಸ್ಯದ ೮೪೫ ನೆಯ ಪುಟ ದಲ್ಲಿ ಹೇಳಿರುವಂತೆ. ಚಾತುರ್ವರ್ಣ್ಯ ವ್ಯವಸ್ಥೆಯು ಅವರವರಸ್ವಭಾವ ಜನ್ಯವಾದ ಗುಣಭೇದಾನುಸಾರವಾಗಿ ನಿರ್ಮಿತವಾಗಿದೆ. ಪುರುಷಸೂಕ್ತದಲ್ಲಿಯಾಗಲೀ ಭಗವದ್ಗೀತೆಯಲ್ಲಾಗಲೀ ಜಾತಿ ತಾರತಮ್ಯವಿರುವುದೆನ್ನಲಾಗುವುದಿಲ್ಲ.

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥೧೩॥

ಪ್ರತಿಪದಾರ್ಥ— ಚಂದ್ರಮಾ-ಚಂದ್ರನು, ಮನಸಃ-ಮನಸ್ಸಿನಿಂದ ಜಾತಃ-ಹುಟ್ಟಿದನು. ಚಕ್ಷೋಃ-ಕಣ್ಣಿನಿಂದ, ಸೂರ್ಯಃ-ಸೂರ್ಯನು ಅಜಾ ಯತ-ಹುಟ್ಟಿದನು, ಮುಖಾತ್-ಮುಖದಿಂದ, ಇಂದ್ರಶ್ಚ ಅಗ್ನಿಶ್ಚ-ಇಂದ್ರನೂ

---

ಸಾಯಣಭಾಷ್ಯಾಧಾರ—

ಪ್ರಜಾಪತೇರ್ಮನಸಃ ಸಕಾಶಾಚ್ಚಂದ್ರಮಾ ಜಾತಃ; ಚಕ್ಷೋಶ್ಚ ಚಕ್ಷುಷಃ ಸೂರ್ಯೋಽ ಪ್ಯಜಾಯತ; ಅಸ್ಯ ಮುಖಾದಿಂದ್ರಶ್ಚಾಗ್ನಿಶ್ಚ ದೇವಾವುತ್ಪನ್ನೌ; ಅಸ್ಯ ಪ್ರಾಣಾದ್ ವಾಯುರಜಾಯತ.

ಮತ್ತು ಅಗ್ನಿಯೂ ಹುಟ್ಟಿದರು. ಪ್ರಾಣಾತ್-ಪ್ರಾಣದಿಂದ, ವಾಯುಃ-ವಾಯುವು ಅಜಾಯತ-ಹುಟ್ಟಿದನು.

ಪದ್ಯಾನುವಾದ—

ಪುಟ್ಟಿದಂ ಚಂದ್ರಮಂ ಪುರುಷನಾ ಮನಸಿನಿಂ ।
ಪುಟ್ಟಿದಂ ದಿನಕರಂ ಪುರುಷನಾ ಕಣ್ಣಿನಿಂ।
ಪುಟ್ಟಲಿಂದ್ರಾಗ್ನಿಗಳ್ ಪುರುಷನಾವದನದಿಂ ।
ಪುಟ್ಟಿದಂ ವಾಯುವಾ ಪುರುಷನ ಪ್ರಾಣದಿಂ ॥

ಸರಳಾನುವಾದ—ಪುರುಷನ ಮನಸ್ಸಿನಿಂದ ಚಂದ್ರನೂ ಅವನ ಕಣ್ಣಿಂದ ಸೂರ್ಯನೂ ಆತನ ಮುಖದಿಂದ ಇಂದ್ರಾಗ್ನಿಗಳೂ ಅವನ ಪ್ರಾಣದಿಂದ ವಾಯುವೂ ಹುಟ್ಟಿದರು.

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಃಶ್ರೋತ್ರಾತ್ತಥಾಲೋಕಾಅಕಲ್ಪಯನ್॥೧೪॥

ಪ್ರತಿಪದಾರ್ಥ—ಅಂತರಿಕ್ಷಂ-ಅಂತರಿಕ್ಷವು, ನಾಭ್ಯಾ- ಪುರುಷನ ಒಕ್ಕಳಿನಿಂದ, ಆಸೀತ್-ಉತ್ಪನ್ನವಾಯಿತು. ದ್ಯೌಃ-ದ್ಯುಲೋಕವು, ಶೀರ್ಷ್ಣಃ-ಶಿರಸ್ಸಿನಿಂದ, ಸಮವರ್ತತ-ಹುಟ್ಟಿತು. ಪದ್ಭ್ಯಾಂ.ಪಾದಗಳಿಂದ, ಭೂಮಿಃ ಭೂಮಿಯು; ಶ್ರೋತ್ರಾತ್-ಕಿವಿಯಿಂದ, ದಿಶಃ-ದಿಕ್ಕುಗಳೂ ಹುಟ್ಟಿದವು; ತಥಾ-ಹಾಗೆಯೇ-ಲೋಕಾನ್-ಲೋಕಗಳನ್ನು, ಅಕಲ್ಪಯನ್-ಮಾಡಿದರು.

ಪದ್ಯಾನುವಾದ—

ಪುರುಷನ ಶರೀರದಿಂ ಹುಟ್ಟಿದವು ಲೋಕಗಳ್ ।
ಶಿರಸ್ಸಿಂ ದ್ಯುಲೋಕಂ, ಶ್ರೋತ್ರದಿಂ ದಿಕ್ಕುಗಳ್ ।
ಹೊರಹೊಮ್ಮಿತಂತರಿಕ್ಷಮುದವನ ಹೊಕ್ಕಳಿಂ ।
ಧರಣಿಮಂಡಲಂ ಪುಟ್ಟಿದುದು ಪಾದಂಗಳಿಂ ॥

---

ಸಾಯಣಭಾಷ್ಯಾಧಾರ—

ನಾಭ್ಯಾಃ-ಪ್ರಜಾಪತೇರ್ನಾಭೇರಂತರಿಕ್ಷಮಾಸೀತ್; ಶೀರ್ಷ್ಣಃ-ಶಿರಸೋದ್ಯೌಃ ಸಮವರ್ತತ-ಉತ್ಪನ್ನಾ; ಅಸ್ಯ ಪದ್ಭ್ಯಾಂ ಪಾದಾಭ್ಯಾಂ ಭೂಮಿರುತ್ಪನ್ನಾ; ಅತ್ರಶ್ರೋತ್ರಾದ್ದಿಶ ಉತ್ಪನ್ನಾಃ.

ಸರಳಾನುವಾದ--ಪುರುಷನ ಶಿರಸ್ಸಿನಿಂದ ದ್ಯುಲೋಕವೂ ಶ್ರೋತ್ರದಿಂದ ದಿಕ್ಕುಗಳೂ ನಾಭಿಯಿಂದ ಅಂತರಿಕ್ಷವೂ, ಪಾದಗಳಿಂದ ಭೂಮಿಯೂ ಹಾಗೆಯೇ ಅವನ ಶರೀರದಿಂದ ಲೋಕಗಳೂ ಪ್ರಾದುರ್ಭವಿಸಿದವು.

## ವಿಮರ್ಶಾತ್ಮಕ ವಿವರಣೆ

13-14 ನೆಯ ಮಂತ್ರಗಳಲ್ಲಿ ಪರಮ ಪುರುಷನ ಮನಸ್ಸಿನಿಂದ ಚಂದ್ರನೂ ಕಣ್ಣಿನಿಂದ ಸೂರ್ಯನೂ, ಮುಖದಿಂದ ಅಗ್ನಿಯೂ, ಪ್ರಾಣದಿಂದ ವಾಯುವೂ, ನಾಭಿಯಿಂದ ಅಂತರಿಕ್ಷವೂ, ಶಿರಸ್ಸಿನಿಂದ ದ್ಯುಲೋಕವೂ ಪಾದದಿಂದ, ಭೂಮಿಯೂ ಕಿವಿಯಿಂದ ದಿಕ್ಕುಗಳೂ ಹುಟ್ಟಿದವೆಂದು ಹೇಳಿದೆ. ಇದೇ ತರದ ಕಲ್ಪನೆಯು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದೆ. ಆರುಜನ ಶ್ರೋತ್ರಿಯರು "ನಮ್ಮ ಆತ್ಮವಾಗಿರುವ ಬ್ರಹ್ಮವು ಯಾವುದು" ಎಂಬ ಪ್ರಶ್ನೆಯನ್ನು ಕುರಿತು ವಿಚಾರ ಮಾಡಿ ನಿಶ್ಚಯಿಸಲಾರದೆ ಅಶ್ವಪತಿಕೈಕೇಯ ರಾಜನ ಬಳಿಗೆ ಹೋಗಿ ಅದನ್ನು ತಿಳಿಸಬೇಕೆಂದು ಕೇಳಿಕೊಳ್ಳುತ್ತಾರೆ. ಯಾರನ್ನು ಕುರಿತು ವೈಶ್ವಾನರಾತ್ಮನೆಂದು ಉಪಾಸನೆ ಮಾಡುತ್ತಿರುವಿರಿ ಎಂದು ರಾಜನು ಪ್ರಶ್ನಿಸುತ್ತಾನೆ. ಒಬ್ಬನು ದ್ಯುಲೋಕವನ್ನು, ಎರಡನೆಯವನು ಆದಿತ್ಯನನ್ನೂ ಮೂರನೆಯವನು ವಾಯುವನ್ನೂ ನಾಲ್ಕನೆಯವನು ಆಕಾಶವನ್ನೂ, ಐದನೆಯವನು ಅಪ್ಪನ್ನೂ ಆರನೆಯವನು ಪೃಥಿವಿಯನ್ನೂ ವೈಶ್ವಾನರಾತ್ಮನನ್ನಾಗಿ ಉಪಾಸನೆಯನ್ನು ಮಾಡುತ್ತಿರುವುದಾಗಿ ಹೇಳಿದರು. ಆಗ ಅಶ್ವಪತಿ ಕೈಕೇಯ ರಾಜನು ವೈಶ್ವಾನರಾತ್ಮನಿಗೆ, ದ್ಯುಲೋಕವು ತಲೆಯೆಂದೂ, ಆದಿತ್ಯನು ಕಣ್ಣೆಂದೂ, ವಾಯುವು ಪ್ರಾಣವೆಂದೂ ಆಕಾಶವು ಶರೀರದ ಮಧ್ಯಭಾಗವೆಂದೂ, ಅಪ್ಪು ಬಸ್ತಿಯೆಂದೂ, ಪೃಥಿವಿಯು ಪಾದಗಳೆಂದೂ ಹೇಳಿ, ದ್ಯುಲೋಕವೆಂಬ ತಲೆಯನ್ನು ಮೊದಲು ಮಾಡಿಕೊಂಡು ಪೃಥಿವಿಯೆಂಬ ಪಾದಗಳವರೆಗಿನ ಎಲ್ಲ ಅವಯವಗಳಿಂದ ಕೂಡಿರುವ ಒಬ್ಬನೇ ವೈಶ್ವಾನರಾತ್ಮನೆಂದು ಉಪಾಸನೆ ಮಾಡಬೇಕೆಂದು ಉಪದೇಶಿಸಿದನು. ಮುಂಡಕೋಪನಿಷತ್ತಿನಲ್ಲಿ ಹೇಳಿರುವ

ಪರಬ್ರಹ್ಮದ ವರ್ಣನೆಯೂ ೧೩-೧೪ ನೆಯ ಪುರುಷಸೂಕ್ತ ಮಂತ್ರಗಳಲ್ಲಿ ಹೇಳಿದಂತೆಯೇ ಇದೆ.

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರ ಸೂರ್ಯೌ ।
ದಿಶಃ ಶ್ರೋತ್ರೇ ವಾಗ್ ವಿವೃತಾತ್ಶ್ಚ ವೇದಾಃ ।
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ।
ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ
ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಂಚಂತಯತ್ರ ಪೂರ್ವೇಸಾಧ್ಯಾಃ
ಸಂತಿ ದೇವಾಃ ॥೧೬॥

ಪ್ರತಿಪದಾರ್ಥ— ದೇವಾಃ-ದೇವತೆಗಳು, ಯಜ್ಞೇನ- ಮಾನಸಿಕ ಯಜ್ಞದಿಂದ, ಯಜ್ಞಂ-ಯಜ್ಞರೂಪ ಪ್ರಜಾಪತಿಯನ್ನು, ಅಯಜಂತ-ಪೂಜಿಸಿದರು. ತಾನಿ-ಆಯಜ್ಞಗಳೇ, ಪ್ರಥಮಾನಿ ಧರ್ಮಾಣಿ-ಪ್ರಥಮ ಧರ್ಮಗಳಾಗಿ, ಆಸನ್-ಪ್ರಸಿದ್ಧವಾದವು. ಪೂರ್ವೇದೇವಾಃ-ಪುರಾತನರಾದ ದೇವತೆಗಳು, ಸಾಧ್ಯಾಃ-ಸಾಧ್ಯರು, ಯತ್ರ-ಯಾವ ಸ್ವರ್ಗದಲ್ಲಿರುವವರೋ, ನಾಕಂ-ಆ ಸ್ವರ್ಗವನ್ನು, ತೇ ಮಹಿಮಾನಃ-ಆ ರೀತಿ ಯಜ್ಞ ಮಾಡುವ ಮಹಾತ್ಮರು, ಸಚಂತೇ-ಪಡೆಯುತ್ತಾರೆ.

---

ಸಾಯಣಭಾಷ್ಯಾಧಾರ—

ದೇವಾಃ–ಪ್ರಜಾಪತಿ ಪ್ರಾಣ ರೂಪಾ, ಯಜ್ಞೇನ-ಯಥೋಕ್ತೇನಮಾನಸೇನ ಸಂಕಲ್ಪೇನ ಯಜ್ಞಂ–ಯಥೋಕ್ತ ಯಜ್ಞಸ್ವರೂಪಂ ಪ್ರಜಾಪತಿಂ, ಅಯಜಂತ- ಪೂಜಿತವಂತಃ ಪ್ರಥಮಾನಿ-ಮುಖ್ಯಾನಿ, ಸಂತಿ-ತಿಷ್ಠಂತಿ, ನಾಕಂ-ವಿರಾಟ್ ಪ್ರಾಪ್ತಿರೂಪಂ ಸ್ವರ್ಗಂ; ಸಚಂತ–ಸಮವಯಂತಿ, ಪ್ರಾಪ್ನುವಂತಿ, ಮಹಿಮಾನಃ, ತದುಪಾಸಕಾ ಮಹಾತ್ಮಾನಃ

**ಪದ್ಯಾನುವಾದ—**

ದೇವತೆಗಳರ್ಚಿಸಲ್ ಯಜ್ಞದಿಂ ಯಜ್ಞಮಂ ।
ಆವುದಂ ಗೈದರಾಯ್ತದೇ ಪ್ರಥಮ ಧರ್ಮಂ ।
ದೇವತೆಗಳುಂ ಸಾಧ್ಯರುಮಿರ್ಪಾನಾಕಮಂ ।
ತಾವುಂ ಪಡೆವರಂತೆ ನಡೆವ ಮಹಿಮರ್ವಲಂ ॥

**ಸರಳಾನುವಾದ—**ದೇವತೆಗಳು ಯಜ್ಞ ಪುರುಷನನ್ನು ಯಜ್ಞದಿಂದ ಪೂಜಿಸಿದರು. ಆ ರೀತಿ ಮಾಡುವುದು ಪ್ರಥಮ ಧರ್ಮವಾಯಿತು. ಅದರಂತೆ ಮಾಡುವ ಮಹಿಮರು, ದೇವತೆಗಳೂ ಸಾಧ್ಯರೂ ಇರುವ ಸ್ವರ್ಗವನ್ನುಪಡೆವರು.

ಪುರುಷಸೂಕ್ತೋಕ್ತ ಪರಮಪುರುಷ ದರ್ಶನವು ಸಂಪೂರ್ಣವಾಗಿ ಈಗ ಆಗಿದೆ. ನಾರಾಯಣ ಋಷಿಯ ಮಾನಸಿಕ ಯಜ್ಞದ ಫಲವಿದು. ಮನಸ್ಸೆಂಬ ಯಜ್ಞಕುಂಡವನ್ನು ಪ್ರಾಣವೆಂಬ ವಾಯುವಿನಿಂದ ಪ್ರಜ್ವಲಗೊಳಿಸಿ, ಪರಮಪುರುಷನ ಚಿಂತನವೆಂಬ ಆಹುತಿಯನ್ನು ಕೊಡಲು ಆಗುವುದು ಮಾನಸಿಕ ಯಜ್ಞ. ಇದರಿಂದ ಪರಮಪುರುಷ ದರ್ಶನವಾಗುವುದು.

ಈಗ ಪುರುಷಸೂಕ್ತೋಕ್ತ ಪರಮಪುರುಷನ ಸಂಪೂರ್ಣ ದರ್ಶನವು ನಮ್ಮ ಮುಂದಿವೆ. ದ್ಯುಲೋಕದಿಂದ ಹಿಡಿದು ಪೃಥ್ವಿಯವರೆಗೆ ಏನೇನಿದೆಯೋ, ಹಿಂದೆ ಇತ್ತೋ, ಮುಂದೆ ಇರುವುದೋ ಅದೆಲ್ಲವೂ ಪರಬ್ರಹ್ಮವೇ; ಅಷ್ಟೇ ಅಲ್ಲ; ಅದುನಿಷ್ಕಲವಾಗಿ ಜ್ಯೋತಿ ಸ್ವರೂಪವಾಗಿ ಇವೆಲ್ಲಕ್ಕೂ ಮೀರಿನಿಂತಿದೆ. ಪರಬಹ್ಮವೆಂಬ ಸಮುದ್ರದಲ್ಲಿ ಚರಾಚರಾತ್ಮಕ ಜಗತ್ತೆಂಬ ತೆರೆನೊರೆಗಳು ಹುಟ್ಟಲಯಿಸುವುವು. ವಚನಕಾರರು ಹೇಳುವಂತೆ "ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಕೋಟಿಗಳುದಯವಲ್ಲದೆ ಬೇರೆ ಆಗ ಬಲ್ಲವೆ.? ತಾಯಿಯ ಹೊಟ್ಟೆಯಲ್ಲಿ ಮಗುವು ಹುಟ್ಟಿ ಬೇರೆಯಾಗುವಂತೆ, ಚರಾಚರಾತ್ಮಕ ಜಗತ್ತೆಂಬ ನೊರೆ ತೆರೆಗಳು ತಾಯಿಯಾದ ಆತ್ಮ ಸಮುದ್ರದಿಂದ ಹೇಗೆ ಎಲ್ಲಿಗೆ ಬೇರೆಯಾಗಿ ಹೋದಾವು ? ಸೂರ್ಯ ಚಂದ್ರ ಭೂಮಿ ಬ್ರಾಹ್ಮಣ ಕ್ಷತ್ರಿಯಾದಿ ಮನುಷ್ಯರ ಕ್ರಿಮಿಕೀಟಗಳೂ ಎಲ್ಲವೂ ಆತ್ಮ ಸಮುದ್ರದಲ್ಲಿನ ಕಣಗಳು. ಸೂರ್ಯನು ಪರಬ್ರಹ್ಮನ ಕಣ್ಣು ಎಂದರೂ ಒಂದೆ ಕಣ್ಣಿನಿಂದ ಹುಟ್ಟಿದನೆಂದರೂ ಒಂದೆ. ಹುಟ್ಟಿದರೆಂಬುದು ಸಮುದ್ರದಲ್ಲಿ ಅಲೆ ಹುಟ್ಟಿದವೆಂಬಂತೆ.ಆಳವಾಗಿ ನೋಡದ ನಮಗೆ ನಾವೇ ಬೇರೆ ಎಂಬ ಭಾವನೆ ಬರುವುದು ನಿಜ; ಆದರೆ ಆಳವಾಗಿ ನೋಡಬಲ್ಲವರಿಗೆ ಏಕತ್ವವೇ ಕಾಣುತ್ತದೆ.

ರಾಧಾಕೃಷ್ಣನ್‌ರವರು ಹೇಳುವಂತೆ

"Below the separate wave crests of consciousness, there is depth of life from which all the unfathomed common spirits draw the springs of their being"

"Each little leaf on a tree may very naturally have sufficient consciousness to believe that it is entirely separate being, maintaining itself in the sunlight and the air, withering away and dying when the winter comes on and there is an end of it. It probably does not realise that at the time it is being supported by the sap which flows from the trunk of the tree and that in its turn it is feeding the tree too. If the leaf could really understand itself, it would see that itself was deeply intimately connected, practically one with the life of the whole tree"

ಮರದ ಎಲೆಗಳಲ್ಲಿ ಪ್ರತಿಯೊಂದು ಎಲೆಯು ತಾನೆ ಬೇರೆ ಹುಟ್ಟಿ, ತಾನು ಬೇರೆಯೆ ಬೆಳೆದು ಬೇರೆಯೆ ಒಣಗಿ ಉದುರಿಹೋಗುವೆನು ಎಂದುಕೊಳ್ಳಬಹುದು. ಸಮುದ್ರದ ಅಲೆಗಳಲ್ಲಿ ಪ್ರತಿಯೊಂದೂ ತಾನೇ ಬೇರೆ ಉದಿಸಿ ಬೆಳೆದು ಅಳಿಯುವೆನೆಂದುಕೊಳ್ಳಬಹುದು. ಆದರೆ ಆಳವಾಗಿ ನೋಡಿದರೆ ಜೀವರುಗಳೆಂಬ ಅಲೆಗಳು ಪರಮಾತ್ಮನೆಂಬ ಸಮುದ್ರದಲ್ಲಿ ಇತರ ಅಲೆಗಳೊಡನೆ ಅಭೇದವಾಗಿರುವುದರ ದರ್ಶನವಾಗುವುದು. ದ್ಯುಲೋಕದಿಂದ ಹಿಡಿದು ಪೃಥಿವಿಯವರೆಗಿರುವುದೆಲ್ಲ ಪರಮಪುರುಷನೆ ಎಂದು ನಾರಾಯಣ ಋಷಿಯು ಮಾನಸಿಕ ಯಜ್ಞದಿಂದ ಅದರ ದರ್ಶನವನ್ನು ನಮಗೆ ಮಾಡಿಸಲು ಪುರುಷಸೂಕ್ತವನ್ನು ನಮಗೆ ದೊರಕಿಸಿರುವನು. ಆ ಋಷಿಯಂತೆಯೇ ಮಾನಸಿಕ ಯಜ್ಞವನ್ನು ಮಾಡಿ ದ್ಯುಲೋಕದಿಂದ ಹಿಡಿದುಪೃಥಿವಿಯವರೆಗಿರುವುದೆಲ್ಲವೂ ಒಂದೆಯೆಂಬ ದರ್ಶನವನ್ನು ಕಂಡರೆ, ಅಶ್ವಪತಿಕೈಕೇಯನ ಉಪದೇಶದಂತೆ ಆತ್ಮಜ್ಞಾನವಾಗುವುದು ; ಆಗ ಶೋಕಮೋಹವಳಿದು ಏಕತ್ವದರ್ಶನವಾಗುವುದು.

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।
ತತ್ರಕೋಮೋಹಃ ಕಃ ಶೋಕಃ ಏಕತ್ವಮನುಶ್ಯತಃ ॥

# ಉಪಸಂಹಾರ

ಮಾನವನ ಮನಸ್ಸನ್ನು ಮೊದಲಿನಿಂದಲೂ ಚಕಿತಗೊಳಿಸಿದ ಪ್ರಶ್ನೆಯು ಮನಮೋಹಕವಾದ ಈ ಜಗತ್ತು ಹೇಗೆ ಯಾರಿಂದ ಸೃಷ್ಟಿಸಲ್ಪಟ್ಟಿತು ?- ಎಂಬುದು. ಒಂದು ಭವನವನ್ನು ನೋಡಿದಾಗ ಅದನ್ನು ಕಟ್ಟಿದವನೊಬ್ಬ ನಿರಬೇಕೆಂಬುದು ತೋಚುವಂತೆ ಈ ಭುವನವನ್ನು ನೋಡಿದಾಗಲೂ ಅದನ್ನು ನಿರ್ಮಿಸಿದವನೊಬ್ಬನಿರಬೇಕೆನಿಸುವುದು. ಇಂದ್ರನೋ ಪ್ರಜಾಪತಿಯೋ ಹಿರಣ್ಯಗರ್ಭನೋ ವಿಶ್ವಕರ್ಮನೋ ಕಟ್ಟಿಸಿದನೆಂದು ಋಗ್ವೇದದ ಋಷಿಗಳಿಗೆ ತೋರಿದುದನ್ನು ಹಿಂದೆಯೇ ಹೇಳಿದೆ. ಕುಂಬಾರನೋ ಕಮ್ಮಾರನೋ ಕಾರ್ಯ ಮಾಡುವಂತೆ ಸೃಷ್ಟಿಕರ್ತನೂ ಸೃಷ್ಟಿಕಾರ್ಯಮಾಡಿರಬೇಕೆಂದು ತೋಚಿದುದು ಸ್ವಾಭಾವಿಕವಾದುದೆ. ಆದರೆ ಮನೆಯನ್ನು ಕಟ್ಟಲು ಬಡಗಿಗೆ ಮರಬೇಕು. ಸೃಷ್ಟಿಯಾಗದ ಮುನ್ನ ಈ ಭುವನ ಭವನವನ್ನು ಕಟ್ಟಲು ಮರವೆಲ್ಲಿಂದ ಬರಬೇಕೆಂಬ ಸಂದೇಹವು ಬಂದಿರಬೇಕಷ್ಟೆ. ಅವನೇ ಸೃಷ್ಟಿಕರ್ತ, ಅವನೇ ಮರ-ಎಂಬುದು ಉತ್ತರ. "ಕಿಂಸ್ವಿದ್ವನಂ? ಕಉಸ ವೃಕ್ಷಃ ?" ಎಂಬ ಪ್ರಶ್ನೆಗಳಿಗೆ "ಬ್ರಹ್ಮವನಂ ಬ್ರಹ್ಮ ಸ ವೃಕ್ಷ ಆಸೀತ್"- ಎಂಬ ಉತ್ತರಗಳನ್ನು ತೈತ್ತಿರೀಯ ಬ್ರಾಹ್ಮಣದ (೨—೮—೯) ರಲ್ಲಿ ನೋಡಬಹುದು. ಮರವೇ ಮನೆಯಾದಂತೆ ಸೃಷ್ಟಿಕರ್ತನೇ ಜಗತ್ತಾಗಿ ಪರಿಣಮಿಸಿದರೆ ಸೃಷ್ಟಿಕರ್ತನೇ ಉಳಿಯುವುದಿಲ್ಲವೆಂದಾಗುವುದು. ನಿಜಗುಣ ಶಿವಯೋಗಿಗಳ ಮಾತಿನಲ್ಲಿ—

ಜಗವಪ್ಪುದುಮೇಣೀಶ್ವರನಿಂದ । ಬಗೆಕಾರಣನೀಶ್ವರನದರಿಂದ ॥
ಎನಲು ಮರನೆ ಮಾಳಿಗೆಯಾದಂತೆ । ಪುನರಪಿಮರನಿಲ್ಲದೆ ಪೋದಂತೆ ॥
ಪರಶಿವನೇ ಜಗದಾಕೃತಿಯಾಗಿ । ಪರಿಣಮಿಸಿದೊಡವನಿಲ್ಲಾಗಿ ॥
ಲೋಕನಿಯಾಮಕನಿಲ್ಲವೆನಿಕ್ಕೆ । ಈ ಕಲ್ಪನೆ ವಿಧಿಯಲ್ಲವದಕ್ಕೆ ॥

ಆದುದರಿಂದ ಪರಮೇಶ್ವರನೇ ಜಗತ್ತಾಗಿ ಪರಿಣಮಿಸಲ್ಪಟ್ಟನೆಂಬ ಕಲ್ಪನೆ ಸರಿಯಲ್ಲ. ಈ ಸಮಸ್ಯೆಯನ್ನು ಪುರುಷ ಸೂಕ್ತವು ಒಂದು ರೀತಿ

ಯಲ್ಲಿ ಪರಿಹರಿಸಿದೆ. ಪರಮಾತ್ಮನ ಚತುರ್ಥಾಂಶ ಮಾತ್ರ ಜಗತ್ತಾಗಿ ಪರಿಣಮಿಸಲು ಉಳಿದ ಮೂರುಪಾಲು ಜಗತ್ತನ್ನತಿಕ್ರಮಿಸಿ ನಿಂದು, ಅದರ ಧಾರಣೆ ಪೋಷಣೆ ಮಾಡುವುದೆಂಬದು ಪುರುಷಸೂಕ್ತದ ನಿಲುವು; ಅಲ್ಲದೆ ಚರಾಚರ ಪ್ರಪಂಚವೆಲ್ಲವೂ ಪರಬ್ರಹ್ಮದ ಬೇರೆ ಬೇರೆ ಭಾಗಗಳಿಂದ ಹೊರ ಹೊಮ್ಮಿದುದಾಗಿ ಹೇಳುವ ಪುರುಷಸೂಕ್ತದವರೆಗೂ ಆದ ಪ್ರಗತಿಯನ್ನು ಹಿಂದೆ ಸೂಚಿಸಿದೆ; ಮುಂದೆ ಋಗ್ವೇದದಲ್ಲಿಯೂ ಪುರುಷ ಸೂಕ್ತದ ಸೃಷ್ಟಿ ಕಲ್ಪನೆಯೇ ಮುಂದುವರೆದು ನಾಸದೀಯ ಸೂಕ್ತದಲ್ಲಿ ಪರಿಪೂರ್ಣತೆಯನ್ನು ಪಡೆದುದನ್ನು ವಿವರಿಸಿ ಉಪಸಂಹಾರ ಮಾಡುವ ಮೊದಲು, ಋಗ್ವೇದದಲ್ಲಿನ ಪುರುಷಸೂಕ್ತದ ಹಿನ್ನೆಲೆಯು ಉಪನಿಷತ್ತುಗಳಲ್ಲಿಯೂ ಇರುವುದನ್ನು ಒಂದೆ ರಡು ಉಪನಿಷತ್ತುಗಳಿಂದ ವಿವೇಚಿಸಲಾಗುವುದು.

## -ಮಾಂಡೂಕ್ಯೋಪನಿಷತ್-

ಆಧ್ಯಾತ್ಮ ದರ್ಶನದ ಅಂತರಾಳವನ್ನೇ ಪ್ರದರ್ಶಿಸಲು ಪ್ರಯತ್ನಿಸುವ ಮಾಂಡೂಕ್ಯೋಪನಿಷತ್ತಿಗೂ ಋಗ್ವೇದೋಕ್ತ ಪುರುಷಸೂಕ್ತದ ಹಿನ್ನೆಲೆಯಿದೆ. "ಪಾದೋಽಸ್ಯ ವಿಶ್ವಭೂತಾನಿ" ಎಂದರೆ ಚರಾಚರಾತ್ಮಕ ಪ್ರಪಂಚ ವೆಲ್ಲವೂ ಪರಬ್ರಹ್ಮದ ಒಂದು ಪಾದವೆಂದರ್ಥ. ಮಾಂಡುಕ್ಯೋಪನಿಷತ್ತಿನಲ್ಲಿ "ವೈಶ್ವಾನರಃ ಪ್ರಥಮಃಪಾದಃ" ಎಂದು ಹೇಳಿರುವುದು ಪುರುಷಸೂಕ್ತದ "ಪಾದೋಽಸ್ಯ ವಿಶ್ವಭೂತಾನಿ" ಎಂಬುದನ್ನು ಜ್ಞಾಪಕಕ್ಕೆ ತರುತ್ತದೆ. ಏಕೆಂದರೆ ವೈಶ್ವಾನರನೆಂದರೆ ವಿಶ್ವಭೂತಾನಿ ಎಂದೇ ಅಭಿಪ್ರಾಯ ಬರುತ್ತದೆ. "ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ ವೈಶ್ವಾನರಃ" ಎಂದು ಉಪನಿಷತ್ತು ವೈಶ್ವಾನರನ ಲಕ್ಷಣಗಳನ್ನು ಹೇಳುತ್ತದೆ. ವೈಶ್ವಾನರ ನಿಗೆ ದ್ಯುಲೋಕವು ತಲೆ, ಆದಿತ್ಯನೇ ಕಣ್ಣು ವಾಯುವೇ ಪ್ರಾಣವು, ಆಕಾ ಶವೇ ಸೊಂಟವು, ನೀರೇ ಮೂತ್ರಸ್ಥಾನವು, ಭೂಮಿಯೇ ಪಾದಗಳು ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ ಆಧಾರದ ಮೇಲೆ, ಇವೇ ವೈಶ್ವಾ ನರನ ಸಪ್ತಾಂಗಗಳು ಎಂಬುದನ್ನು ಶಾಂಕರ ಭಾಷ್ಯವು ನಿರ್ಧರಿಸಿದೆ. ಪಂಚ ಜ್ಞಾನೇಂದ್ರಿಯುಗಳೂ, ಮತ್ತು ಮನಸ್ಸು ಬುದ್ಧಿ ಅಹಂಕಾರ, ಚಿತ್ತ ಇವೂ

ವೈಶ್ವಾನರನ ಏಕೋನವಿಂಶತಿ ಮುಖಗಳು ಎಂದು ಅರ್ಥ. ವೈಶ್ವಾನರನು ಸ್ಥೂಲಭುಕ್ ಎಂದೂ ಹೇಳಿದೆ. ಆದುದರಿಂದ 'ವೈಶ್ವಾನರಃ' ಎಂಬುದು "ವಿಶ್ವಭೂತಾನಿ" ಎಂಬುವದಕ್ಕೆ ಹೊಂದುತ್ತದೆ.

ಎರಡನೆಯದಾಗಿ ಪುರುಷಸೂಕ್ತದ "ಪಾದೋಽಸ್ಯವಿಶ್ವಭೂತಾನಿ" ಎಂದು ಹೇಳಿರುವುದರಿಂದ ವಿಶ್ವಭೂತಗಳೆಲ್ಲ ಪರಮಾತ್ಮಾಂಶಗಳಾಗಿರುವುವೇ ಹೊರತು ಬೇರೆಯಲ್ಲ; ಆದುದರಿಂದ ಪುರುಷಸೂಕ್ತದ ಈ ನಿಲುವು ಸರ್ವಂ ಹ್ಯೇತದ್ ಬ್ರಹ್ಮ ಎಂದು ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿರುವುದಕ್ಕೆ ಸರಿ ಹೋಗುತ್ತದೆ.

ಮೂರನೆಯದಾಗಿ ಪುರುಷಸೂಕ್ತದ ನಿಲುವಿನಂತೆ ಎಲ್ಲವೂ ಪರಮಾತ್ಮ ನಿಂದಲೇ ಹೊರಹೊಮ್ಮಿರುವುದರಿಂದ ಎಲ್ಲವೂ ಅದರಲ್ಲಿಯೇ ಇದ್ದು ಅದರಲ್ಲಿ ಯೇ ಲಯವಾಗಬೇಕಷ್ಟೆ; ಏಕೆಂದರೆ "ಯದ್‌ದೃಷ್ಟಂ ತನ್ನಷ್ಟಂ" ಎಂಬುದು ಸಿದ್ಧಾಂತ; ಆದುದರಿಂದ ಚರಾಚರಾತ್ಮಕ ಪ್ರಪಂಚವೂ ಪರ ಬ್ರಹ್ಮನಿಗಿಂತ ಬೇರೆಯಾಗಿರದೆ ಎಲ್ಲವೂ ಅದ್ವೈತವೆಂಬುದೂ ಪುರುಷ ಸೂಕ್ತದ ನಿಲುವೆಂದಾಯಿತು. ಇದರಂತೆ ಮಾಂಡೂಕ್ಯೋಪನಿಷತ್ತು "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ" ಎಂದು ಹೇಳಿದೆ. ಈ ಉಪನಿಷತ್ತಿಗೆ ಪುರುಷ ಸೂಕ್ತದ ಹಿನ್ನೆಲೆಯಿರುವುದು ಸ್ಪಷ್ಟ.

ಪರಮಾತ್ಮ ತತ್ತ್ವದಲ್ಲಿಯೂ ಅದರ ವಾಚಕವಾದ ಓಂಕಾರದಲ್ಲಿಯೂ ಎಚ್ಚರ ಕನಸು ನಿದ್ರೆ ತುರೀಯವೆಂಬ ನಾಲ್ಕು ಅವಸ್ಥೆಗಳನ್ನು ಮುಂಡಕೋಪ ನಿಷತ್ತಿನಲ್ಲಿ ಹೇಳಿದೆ. ಮೊದಲ ಮೂರು ಅವಸ್ಥೆಗಳನ್ನು ಮೀರಿದ ತುರೀಯಾ ವಸ್ಥೆಯು, ಪುರುಷ ಸೂಕ್ತದಲ್ಲಿ ಹೇಳಿರುವ "ತ್ರಿಪಾದಸ್ಯಾಮೃತಂದಿವಿ" ಎಂಬುದನ್ನು ನೆನಪಿಗೆ ತರುತ್ತದೆ. ಮಾಂಡೂಕ್ಯೋಪನಿಷತ್ತಿನ ಹೆಚ್ಚು ವಿವರಗಳನ್ನು ತಿಳಿಯಬೇಕೆನ್ನುವವರು ನಾನು ಬರೆದಿರುವ ತ್ರಿಮತಾಚಾರ್ಯ ಭಾಷ್ಯೋಪೇತ ವಿವರಣಾತ್ಮಕ "ಮಾಂಡೂಕ್ಯೋಪನಿಷತ್.ಪ್ರಕಾಶ" ಗ್ರಂಥ ವನ್ನು ಓದಬಹುದು. ಇಲ್ಲಿ ತುಲನೆಗಾಗಿ ಅದರ ಮೊದಲ ನಾಲ್ಕು ಮಂತ್ರಗಳ ಪದ್ಯಾನುವಾದವನ್ನು ಕೊಟ್ಟಿದೆ:

ಓಂಕಾರ ಅಕ್ಷರಕೆ ಉಪವ್ಯಾಖ್ಯಾನವಿದು ।
ಓಂಕಾರವೆ ಇದೆಲ್ಲ ಇಂದಿನದು ಹಿಂದಿನದು ।
ಓಂಕಾರವೇ ಆಹುದು ಮುಂದಿನದದೆಲ್ಲವದು ।
ಓಂಕಾರವೇ ತ್ರಿಕಾಲಾತೀತವಾದುದದು ॥೧॥

ಆತ್ಮವುಂ ಬ್ರಹ್ಮವೇ ಎಲ್ಲವೂ ಬ್ರಹ್ಮವಲ್ ।
ಆತ್ಮವಿದಕಿರುವುವವು ನೆರೆ ನಾಲ್ಕು ಪಾದಗಳ್ ॥೨॥

ಮೊದಲನೆಯ ಪಾದವದು ಬಗೆಯೆ ವೈಶ್ವಾನರಂ ।
ವದನಗಳವಂಗೆ ಪತ್ತೊಂಬತ್ತು ಮೇಣವಂ ।
ಹೊರಗಿನರಿವು ಸಪ್ತಾಂಗಗಳ್ ಸ್ಥೂಲಭೋಗಂ ।
ಅರಿಯಲಂತೆ ಜಾಗರಿತ ಸ್ಥಾನವುಳ್ಳವಂ ॥೩॥

ಎರಡನೆಯ ಪಾದವದು ಬಗೆಯಲಾ ತೈಜಸಂ ।
ನೆರೆ ಮೊಗವವಂಗೆ ಪತ್ತೊಂಬತ್ತು ಮೇಣವಂ ।
ಪರಿಕಿಸಿದೊಡೆ ಸಪ್ತಾಂಗಗಳ್ ಸೂಕ್ಷ್ಮಭೋಗಂ
ಅರಿವೊಳಗಿನದು ಸ್ವಪ್ನಸ್ಥಾನವುಳ್ಳವಂ ॥೪॥

## ತ್ರಿಪಾದ್ವಿಭೂತಿ ಮಹಾನಾರಾಯಣೋಪನಿಷತ್

ಸ್ತೋತ್ರದಿಂದ ಪ್ರಾರಂಭವಾಗುವ ಈ ಉಪನಿಷತ್ತಿನಲ್ಲಿನ ಬ್ರಹ್ಮ ಸ್ವರೂಪ ನಿರೂಪಣೆಯಿದು–"ಕಾಲತ್ರಯಾಬಾಧಿತಂ ಬ್ರಹ್ಮ, ಸರ್ವಕಾಲಾ ಬಾಧಿತಂ ಬ್ರಹ್ಮ. ಸಗುಣ ನಿರ್ಗುಣ ಸ್ವರೂಪಂ ಬ್ರಹ್ಮ, ಆದಿ ಮಧ್ಯಾಂತ ಶೂನ್ಯಂಬ್ರಹ್ಮ, ಸರ್ವಂ ಖಲ್ವಿದಂ ಬ್ರಹ್ಮ,........ಪ್ರಣವಾತ್ಮಕಂ ಬ್ರಹ್ಮ, ಪ್ರಣವಾತ್ಮಕತ್ವೇನೋಕ್ತಂ ಬ್ರಹ್ಮ, ಪ್ರಣವಾದ್ಯಖಿಲಮಂತ್ರಾತ್ಮಕಂ ಬ್ರಹ್ಮ, ಪಾದಚತುಷ್ಟಯಾತ್ಮಕಂ ಬ್ರಹ್ಮ." ಪರಬ್ರಹ್ಮ ಪ್ರಣವಗಳಲ್ಲಿ ಅಭೇದವನ್ನು ಕಾಣುವ ಮಾಂಡೂಕ್ಯೋಪನಿಷತ್ತಿನಂತೆ ಈ ಉಪನಿಷತ್ತಿನಲ್ಲಿ ಬ್ರಹ್ಮವು ಪ್ರಣವಾತ್ಮಕವೆಂದು ಹೇಳಿರುವುದಲ್ಲದೆ ಅದು ಪಾದಚತುಷ್ಟಯಾತ್ಮಕವೆಂದೂ ಹೇಳಿರುವುದು, ಪಾದಚತುಷ್ಟಯಗಳನ್ನು ಹೇಳಿರುವ ಪುರುಷಸೂಕ್ತವನ್ನೂ ಮಾಂಡೂಕ್ಯೋಪನಿಷತ್ತನ್ನೂ ಜ್ಞಾಪಕಕ್ಕೆ

ತರುತ್ತದೆ. ಇನ್ನು ಬ್ರಹ್ಮದ ನಾಲ್ಕು ಪಾದಗಳಾವುವು ? ಎಂದರೆ—ಅವಿದ್ಯಾ ಪಾದಃ, ಸುವಿದ್ಯಾಪಾದಶ್ಚ, ಆನಂದಪಾದಃ ತುರೀಯಪಾದಶ್ಚ ಇತಿ" ಎಂದು ಹೇಳುತ್ತದೆ. ಮುಂದೆ ಅವಿದ್ಯಾಪಾದವನ್ನು ಕುರಿತು ಈ ಉಪನಿಷತ್ತಿನಲ್ಲಿ "ತತ್ರಾಪ್ರಥಮಸ್ತನಮೇಕಂ ಪಾದಮವಿದ್ಯಾಶಬಳಂ ಭವತಿ" ಎಂದು ಹೇಳಿರುವುದರಿಂದ ಪರಬ್ರಹ್ಮದ ಮೊದಲನೆಯ ಪಾದವಾದ ಅವಿದ್ಯಾಪಾದವು, ಅನಿತ್ಯವಾದ 'ಪಾದೋಽಸ್ಯ ವಿಶ್ವಭೂತಾನಿ' ಎಂದು ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವ ಚರಾಚರಾತ್ಮಕಾಖಿಲ ಜಗತ್ತೇ ಆಗಿದೆ; "ಉಪರಿತನ ಪಾದತ್ರಯಂ ಶುದ್ಧಬೋಧಾನಂದಲಕ್ಷಣಮಮೃತಂ ಭವತಿ" ಎಂಬ ವಿವರಣೆಯು ಮೇಲಿನ ಮೂರು ಪಾದಗಳ ದಿವ್ಯತೆಯನ್ನು ಸೂಚಿಸುತ್ತದೆ. 'ವಿದ್ಯಾನಂದ ತುರೀಯಾಂಶಾಸ್ಸರ್ವೇಷು ಪಾದೇಷು ವ್ಯಾಪ್ಯತಿಷ್ಠಂತಿ' ಎಂದೀ ಉಪನಿಷತ್ತು ಹೇಳುವ ವಿದ್ಯಾಪಾದ, ಆನಂದಪಾದ ತುರೀಯ ಪಾದಗಳು "ತ್ರಿಪಾದೂರ್ಧ್ವ ಉದೈತ್ ಪುರುಷಃ" ಎಂದು ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವ ಪುರುಷನ ತ್ರಿಪಾದಗಳೇ ಎಂಬುದು ಸ್ಪಷ್ಟ. ಹಾಗೆಯೇ ಅವನು ಊರ್ಧ್ವಃ ಉದೈತ್ ಎಂದರೆ ಅವಿದ್ಯಾಪಾದವಾದ ಜಗತ್ತಿಗಿಂತ ಮೇಲೆ ದಿವ್ಯಲೋಕದಲ್ಲಿರುವನೆಂಬುದೂ ಸ್ಪಷ್ಟವೇ. "ಸಭೂಮಿಂ ವಿಶ್ವತೋವೃತ್ವಾತ್ಯತಿಷ್ಠದ್ದಶಾಂಗುಲಂ"-ಎಂಬಂತೆ, ಅವನು ದಿವ್ಯಲೋಕದಲ್ಲಿ ಮೇಲಿರುವನಾದರೂ, ಕೆಳಗಿರುವ ಅವಿದ್ಯಾಪಾದರೂಪವಾದ ವಿಶ್ವಜಗತ್ತನ್ನು ಸುತ್ತುವರಿದು ವ್ಯಾಪಿಸಿರುವನೆಂಬುದನ್ನು ಸಹ, ಮೇಲಿನ ವಾಕ್ಯವು ಸ್ಪಷ್ಟಪಡಿಸುತ್ತದೆ. ಹೀಗೆ ಪುರುಷಸೂಕ್ತದಲ್ಲಿನ ಕಲ್ಪನೆಯಿಂದಲೇ ಉಪನಿಷತ್ತಿನ ಈ ಭಾಗವು ಪ್ರೇರಿತವಾಗಿದೆ.

ಮೇಲಿನ ಮೂರು ಪಾದಗಳ ಮಧ್ಯೆ ವೈಕುಂಠ, ಕ್ಷೀರಸಾಗರ ಮತ್ತು ಸೂರ್ಯ ಮಂಡಲಗಳೆಂಬ ಮೂರು ವಿಷ್ಣುಧಾಮಗಳಿರುವುವು. ಸೂರ್ಯ ಮಂಡಲದಲ್ಲಿರುವ ಆದಿನಾರಾಯಣನನ್ನು "ಸ ಏವತುರೀಯಂ ಬ್ರಹ್ಮ, ಸ ಏವ ತುರಿಯಾತೀತಃ, ಸ ಏವ ವಿಷ್ಣುಃ ಸ ಏವ ಸಮಸ್ತ ಬ್ರಹ್ಮ ವಾಚಕವಾಚ್ಯಃ ಸಏವ ಪರಂಜ್ಯೋತಿಃ" ಎಂದು ಮೊದಲಾಗಿ ವರ್ಣಿಸಿದೆ. ಈ ಉಪನಿಷತ್ತಿನಲ್ಲಿ ಸೃಷ್ಟಿಕರ್ತನಾದ ಬ್ರಹ್ಮ, ಸ್ಥಿತಿಕರ್ತನಾದ ವಿಷ್ಣು

ಲಯಕರ್ತನಾದ ಈಶ್ವರ ಎಂಬ ತ್ರಿಮೂರ್ತಿಗಳಿಗೂ ಕಾರಣವಾದ ಪರಬ್ರಹ್ಮ ವನ್ನು, ಈ ಉಪನಿಷತ್ತಿನ ಹೆಸರಿನಿಂದಲೇ ವ್ಯಕ್ತವಾಗುವಂತೆ, ಮಹಾನಾರಾ ಯಣನೆಂದು ಕರೆಯಲಾಗಿದೆ. ಅಲ್ಲದೆ-"ಅನಂತ ಕೋಟಿ ಬ್ರಹ್ಮಾಂಡಾ ನಾಮುದಯಸ್ಥಿತಿಲಯಾದ್ಯಖಿಲ ಕಾರ್ಯಕಾರಣಜಾಲ ಪರಮ ಕಾರಣಭೂತೋ ಮಹಾಮಾಯಾತೀತಸ್ತುರೀಯಃ ಪರಮೇಶ್ವರೋ ಜಯತಿ ತಸ್ಮಾತ್ ಸ್ಥೂಲ ವಿರಾಟ್ ಸ್ವರೂಪೋಭವತಿ–ಸೋನಂತ ಶೀರ್ಷಾಪುರುಷ ಅನಂತಾಕ್ಷಿಪಾಣಿಪಾದೋಭವತಿ, ಅನಂತಶ್ರವಣ ಸ್ಸರ್ವಮಾವೃತ್ಯ ತಿಷ್ಠತಿ" ಎಂದು ಮುಂತಾಗಿ ಈ ಉಪನಿಷತ್ತಿನಲ್ಲಿ ಉಕ್ತ ವಾಗಿರುವುದು, ಸಹಸ್ರ ಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ಎಂದು ಪ್ರಾರಂಭವಾಗಿರುವ ಪುರುಷಸೂಕ್ತವು ಈ ಉಪನಿಷತ್ತಿಗೆ ಹಿನ್ನೆಲೆ ಯಾಗಿದೆಯೆಂಬುದನ್ನು ವ್ಯಕ್ತಮಾಡುತ್ತದೆ.

## ನಾಸದೀಯಸೂಕ್ತ

ದೇವದೇವನೆನಿಸಿದ ಇಂದ್ರನಿಂದ ಸೃಷ್ಟಿಯಾಯಿತೆಂಬ ಕಾಲದಿಂದ ಋಗ್ವೇದ ಋಷಿಗಳ ಮನದಲ್ಲಿ ಪ್ರಗತಿ ಹೊಂದಿದ ಸೃಷ್ಟಿ ಕಲ್ಪನೆಯು ಪುರುಷ ಸೂಕ್ತದಲ್ಲಿ ಭವ್ಯತೆಯ ಮಟ್ಟವನ್ನು ಮುಟ್ಟಿ ಮುಂದುವರಿದು ನಾಸದೀಯ ಸೂಕ್ತದಲ್ಲಿ ಪರಿಪೂರ್ಣತೆಯನ್ನು ಪಡೆಯಿತೆನ್ನಬಹುದು. ಸೃಷ್ಟಿಯಾಯಿತೆನ್ನು ವುದರಲ್ಲಿಯೇ ಒಬ್ಬ ಸೃಷ್ಟಿಕರ್ತನೆಂಬ ವ್ಯಕ್ತಿಯ ಭಾವನೆ ಬರುವುದು; ಸಾವಿರಾರು ಕಣ್ಣು ಕಿವಿ ಕೈಕಾಲು ತಲೆಗಳ ಪುರುಷನು ತನ್ನೊಳಗಿನಿಂದ ಜಗತ್ತನ್ನು ಹೊರ ಹೊಮ್ಮಿಸಿದನೆಂದು ಹೇಳುವ ಪುರುಷ ಸೂಕ್ತದಲ್ಲಿ ಒಂದು ಅವ್ಯಕ್ತ ತತ್ತ್ವದಿಂದ ಜಗತ್ತು ಸೃಷ್ಟಿಯಾಯಿತು—ಎನ್ನುವುದಕ್ಕಿಂತ ಅದು ಆವಿರ್ಭಾವವಾಯಿತು-ಎಂಬ ಭಾವನೆಯಿದೆ. ಆದರೆ ಕಣ್ಣು ಕಿವಿ ಕೈಕಾಲ್ಗಳು ತಲೆಗಳುಳ್ಳುದೆಂಬುದರಲ್ಲಿಯೇ, ಒಂದು ಅವ್ಯಕ್ತ ವ್ಯಕ್ತಿಯ ಭಾವನೆ ಪುರುಷ ಸೂಕ್ತದಲ್ಲಿ ಬರುವುದು. ನಾಸದೀಯ ಸೂಕ್ತದ ಕಲ್ಪನೆಯಲ್ಲಾದರೋ ಸೃಷ್ಟಿ ಕರ್ತನೆಂಬ ವ್ಯಕ್ತಿಯ ಭಾವನೆಯ ಸುಳಿವೇ ಇಲ್ಲ; ಜಗತ್ತು ಆವಿರ್ಭಾವ

ವಾಗುವುದು ಒಂದು ಪರಮ ತತ್ತ್ವದಿಂದ; ಆ ಪರಮತತ್ತ್ವವು ಸಕಲ ವಾದುದೇ ಅಲ್ಲ; ಅದು ನಿಷ್ಕಲವಾದುದು. ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳಾಗಿ ಹೊರ ಹೊಮ್ಮದೆ ಇರುವ ಚೈತನ್ಯದಿಂದ ತದೇಕವಾಗಿ ಸ್ಫುರಿಸುತ್ತಿದ್ದ ಆ ಪರಮತತ್ತ್ವದ ಸ್ಥಿತಿ ನಾಸದೀಯ ಸೂಕ್ತದಂತೆ ಸೃಷ್ಟಿಪೂರ್ವ ಸ್ಥಿತಿ.

ಪುರುಷ ಸೂಕ್ತದ ಪದ್ಯಾನುವಾದದೊಡನೆ ತುಲನೆಗಾಗಿ ನಾಸದೀಯ ಸೂಕ್ತದ ಮೊದಲ ಮೂರು ಮಂತ್ರಗಳ ಪದ್ಯಾನುವಾದವನ್ನಿಲ್ಲಿ ಕೊಟ್ಟಿದೆ—

ಇರದಂದು ಸತ್ತೆನಿಪಸತ್ತೆನಿಪುದಾವುದುಂ ।
ಇರದಂದು ಲೋಕಗಳ್ ಮೇಲಿನಾ ವ್ಯೋಮಮುಂ ।
ಇರದಂದು ಅಪರಾಜಿ ಪರಲೋಕವಾವುದುಂ ।
ಇರಲುಂಟೆ ಆವರಿಪುದೇನಾದರಾದೊಡಂ ? ।
ಇರಲುಂಟೆ ಯಾರಿಗೆಲ್ಲುಂಟು ಸುಖಸಾಧನಂ ? ।
ಇರಲುಂಟೆ ಗಹನಂಗಭೀರಮೆನಿಪಂಬುವುಂ ? ॥೧॥

ಇರಲಿಲ್ಲ ಮರಣಮುಂ ಮತ್ತೆಯಮರತ್ವಮುಂ ।
ಇರಲಿಲ್ಲ ಪಗಲೆಂಬ ನಿಶಿಯೆಂಬುದಾವುದುಂ ।
ಇರಲಿಲ್ಲವಂತೋರ್ಪಿನ ಶಶಿಪ್ರಕೇತಮುಂ ।
ಇರಲಿಲ್ಲ ಅದನುಳಿದುದಿನಿತುಮುಂ ವಾಯುವುಂ ।
ಇರದೊಡಂ ಸ್ವಸ್ವರೂಪೈಕ ಚಿಚ್ಛಕ್ತಿಯಿಂ ।
ಸ್ಫುರಿಸುತಿರ್ದುದದ್ವೈತ ಪರಮಾತ್ಮ ತತ್ತ್ವಂ ॥೨॥

ಕವಿದಿತ್ತು ಗಾಢತಮಮಾರಂಭದಾದಿಯೊಳ್ ।
ಕವಿದಿತ್ತು ಸಲಿಲಮದು ಎಲ್ಲವುಂ ತಿಳಿಯದೊಲ್ ।
ಕವಿದಿತ್ತು ಮಾಯೆಯದು ಬಯಲೆನಿಪ ತತ್ತ್ವಮಂ ।
ತವೆಪರಮನೆಸಗಿದಾ ತಪದ ಮಹಿಮೆಯಿಂ ಸಂ ।
ಭವಿಸಿತು (ದ್ವೈತ) ಜಗಮದ್ವೈತ ತತ್ತ್ವದಿಂ ॥೩॥

ನಾಸದೀಯ ಸೂಕ್ತದ ಹೆಚ್ಚು ಪರಿಚಯವನ್ನು ನಾನು ಬರೆದಿರುವ "ಸಾಯಣಭಾಷ್ಯೋಪೇತ ವಿವರಣಾತ್ಮಕ ನಾಸದೀಯ ಸೂಕ್ತ" ಗ್ರಂಥದಿಂದ ಮಾಡಿಕೊಳ್ಳಬಹುದು. ಅದರ ಸಂಕ್ಷಿಪ್ತ ಚಿತ್ರವನ್ನಿಲ್ಲಿ ಕಾಣಿಸಿದೆ.

"ಜಗಮಿದೇನೆಲ್ಲಿ ಪುಟ್ಟಿ ಬಂಧುರವಾಗಿ ತೋರುತಿಹುದೆಂತು–" ಎಂಬ ಜಗದಾದಿಯಿಂದ ಕೇಳಿ ಬರುತ್ತಿರುವ ಪ್ರಶ್ನೆಯನ್ನೆತ್ತಿ ಶ್ರೀಮನ್ನಿಜಗುಣ ಶಿವಯೋಗಿಗಳು ಹೀಗೆ ಉತ್ತರವಿತ್ತಿರುವರು:

ವರ ಸಚ್ಚಿದಾನಂದ ಪರಿಪೂರ್ಣನಿತ್ಯನಿಜ । ನಿಂತಿತಯ
ನಿರ್ವಿಕಲ್ಪ ನಿರುಪಾದಿಯಾ | ಗಿರುತಿರ್ಪುದೊಂದು ಪರಮಾತ್ಮ ॥
ಉಂಟೆನಿಸದಿಲ್ಲೆನಿಸದಖಿಳ । ಕಂಟಕದ ಬೀಜ
ಎನಿಪನಾದಿಯ ಅವಿದ್ಯೆ | ಉಂಟಾತ್ಮಸತ್ತೆಯೊಡಗೂಡಿ ॥
ಆಧಾರವಾಬ್ರಹ್ಮ ಆಧೇಯವೀಮಾಯೆ । ಆಧಾರದಲ್ಲಿ
ಬೆರೆಸಿ ಬೇರಿಲ್ಲದಂ | ತಾಧೇಯಮಿರ್ಪುದೆಲೆ ಪುತ್ರ ॥

ಪರಬ್ರಹ್ಮದ ಸದಸದ್ ವಿಲಕ್ಷಣವಾದ ಶಕ್ತಿಯ ಆವಿರ್ಭಾವದಿಂದಲೇ ಜಗತ್ ಸೃಷ್ಟಿಯಾಗುವುದೆಂಬ ಈ ಭಾವನೆಯೇ ನಾಸದೀಯ ಸೂಕ್ತದಲ್ಲಿಯೂ ಇರುವುದು. ಇದನ್ನರಿಯಲು ನಾಸದೀಯ ಸೂಕ್ತದ ಮೊದಲನೆಯ ಮೂರು ಮಂತ್ರಗಳ ಅರ್ಥದ ವಿವೇಚನೆಯು ಅವಶ್ಯಕ.

ಕವಿದಿತ್ತು ಗಾಢತಮಮಾರಂಭದಾದಿಯೊಳ್ ।
ಕವಿದಿತ್ತು ಸಲಿಲಮದು–ಎಲ್ಲಮುಂ ತಿಳಿಯದೊಲ್ ।

ಎಂಬಂತೆ ಪ್ರಾರಂಭವಾಗುವುದು ಮೂರನೆಯ ಮಂತ್ರ. ಇಲ್ಲಿ ಗಾಢ ತಮದಿಂದ ಕೂಡಿದ ಸಲಿಲವು ಏನೇನು ತಿಳಿಯದಂತೆ ಆವರಿಸಿರುವುದೆಂಬು ದರ ಅರ್ಥವೇನು? ತಮವೆಂದರೆ–ಕಗ್ಗತ್ತಲೆಯು ಹೇಗೆ ಪದಾರ್ಥಗಳೇ ನೇನೂ ಕಾಣದಂತೆ ಆವರಿಸುವುದೋ, ಹಾಗೆ ಆವರಿಸುವ "ಮಾಯಾಪರ ಸಂಜ್ಞಂ" ಎಂದು ಸಾಯಣಭಾಷ್ಯದಲ್ಲಿ † ಹೇಳಿದೆ. ಇನ್ನು "ಸಲಿಲ"ವೆಂಬ

ಸಾಯಣಭಾಷ್ಯಾಧಾರ –

† ತಮಸಾಗೂಳ್ಹಂ–ಯಥಾನೈಶಂ ತಮಃ ಸರ್ವ ಪದಾರ್ಥ ಜಾತ ಮಾವೃಣೋತಿ ತದ್ವತ್ ಆತ್ಮತತ್ವಸ್ಯ ಆವರಕತ್ವಾತ್ ಮಾಯಾಪರ ಸಂಜ್ಞಂ.

ಪದದ ಸಂಕೇತವೇನೆಂದರೆ–ಸಾಯಣಭಾಷ್ಯದಲ್ಲಿ† ಹೇಳಿರುವಂತೆ ಹಾಲಿನಲ್ಲಿ ನೀರು ಇದ್ದೂ ಹೇಗೆ ಇಲ್ಲದಂತೆ ತೋರುವುದೋ ಹಾಗಿರುವುದು. ಇದ್ದೂ ಇಲ್ಲದಂತಿರುವ ಮಾಯೆಯನ್ನು ಸಲಿಲವೆಂದು ಕರೆದಿದೆ. "ಅಪ್ರಕೇತಂ" * ಎಂದರೆ ಏನೇನೂ ತಿಳಿಯದಂತೆ ಆವರಿಸಿರುವುದು ಮಾಯೆಯೆಂಬುದನ್ನು ಮಂತ್ರವು ಮತ್ತೆ ಸ್ಪಷ್ಟ ಮಾಡುತ್ತದೆ. "ತಪಸಸ್ತನ್ಮಹಿನಾಜಾಯತೈಕಂ" ಎಂದರೆ ಪರಬ್ರಹ್ಮವು ಸೃಷ್ಟಿಸಬೇಕೆಂದು ಇಚ್ಛಿಸಲು ಜಗತ್ತು ಹೊರಹೊಮ್ಮುವುದು ಎಂದೂ, ಹಾಗೆ ಆಗುವುದಕ್ಕಾಗಿ 'ತುಚ್ಛೇನ ಅಭು ಅಪಿಹಿತಂ' ಎಂದರೆ ಪರಬ್ರಹ್ಮವು ಮಾಯಾಶಕ್ತಿಯಿಂದ ಆವರಿಸಲ್ಪಡುತ್ತದೆ ಎಂದೂ ಮಂತ್ರವು ಹೇಳುವುದು. ತುಚ್ಛೇನ ಎಂದರೆ ಸದಸದ್ ವಿಲಕ್ಷಣೇನ ಎಂದು ಸಾಯಣ ಭಾಷ್ಯವು ಹೇಳುವುದು; "ಆಭು" ಎಂದರೆ ಟೊಳ್ಳು; ಏನೇನೂ ಇಲ್ಲದುದು, ಶೂನ್ಯವಾದುದು ಎಂಬ ದೃಷ್ಟಿಯಿಂದ ಆಭು ಎಂದರೆ ಬ್ರಹ್ಮವೆಂದೂ, ತುಚ್ಛೇನ ಅಪಿಹಿತಂ–ಎಂದರೆ ಮಾಯೆಯಿಂದ ಪರಬ್ರಹ್ಮವು ಆವೃತವಾಗಿದೆಯೆಂದೂ, ಲೋಕಮಾನ್ಯ ತಿಲಕರು ಗೀತಾರಹಸ್ಯದಲ್ಲಿ ಅರ್ಥ ಮಾಡಿದ್ದಾರೆ. "ಆಭು" ಎಂಬ ಪದವು ಇಂಗ್ಲಿಷಿನಲ್ಲಿ "void" ಎಂಬ ಪದದಿಂದ ಭಾಷಾಂತರಿಸಲ್ಪಟ್ಟಿದೆ. ತಪಸಃ ಎಂದರೆ ಸೃಷ್ಟಿಸಬೇಕೆಂಬ ಪರ್ಯಾಲೋಚನಾ ರೂಪವಾದ ತಪಸ್ಸಿನಲ್ಲಿದ್ದಾಗ ಬಯಲು ಅಥವಾ ಶೂನ್ಯವೆಂದು ಕರೆಯಬಹುದಾದ ಪರಬ್ರಹ್ಮವು ನೀರಿನಂತೆ ನಿಬಿಡವಾಗಿ ಕತ್ತಲಂತೆ ಗಾಢವಾಗಿ ವ್ಯಾಪಿಸಿರುವ ಮಾಯಾಶಕ್ತಿಯಿಂದ ವಿಶಿಷ್ಟವಾಗಿರುತ್ತದೆ ಎಂಬುದು ಈ ಮಂತ್ರದ ಅಭಿಪ್ರಾಯ; ಅರ್ಥಾತ್ ಸೃಷ್ಟಿಸುವ ಇಚ್ಛೆಯುಂಟಾದಾಗ ನಿರ್ವಿಶೇಷವಾಗಿದ್ದ ಅಭು ಅಥವಾ ಬಯಲು ಎನ್ನಬಹುದಾದ ಪರಮತತ್ತ್ವವು ಶಕ್ತಿವಿಶಿಷ್ಟವಾಗಿರುತ್ತದೆ. ಆದರೆ 'ಅಂಭಃ ಕಿಮಾಸೀತ್ ಗಹನಂ ಗಭೀರಂ?' ಎಂದರೆ ಸೃಷ್ಟಿಗಿಂತಲೂ ಪೂರ್ವಕಾಲದಲ್ಲಿ ಪರಮತತ್ತ್ವವು

---

† ಸಲಿಲಂ ಇತಿ ಲುಪ್ತೋಪಮಂ; ಸಲಿಲಮಿತಿ; ಯಥಾಕ್ಷೀರೇಣಾವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾವಿಭಾಗಾಪನ್ನಂ.

* ಅಪ್ರಜ್ಞಾಯಮಾನಂ

ಶಕ್ತಿವಿಶಿಷ್ಟವಾಗಿರುವುದೆ?-ಎಂಬ ಪ್ರಶ್ನೆಯು ನಾಸದೀಯ ಸೂಕ್ತದ ಮೊದಲನೆಯ ಮಂತ್ರದಲ್ಲಿ ಎದ್ದಿದೆ? ಇಲ್ಲವೆಂದೇ ಹೇಳುವುದು ಪ್ರಶ್ನೆಯ ಅಭಿಪ್ರಾಯವೆಂಬುದು ಸಾಯಣಭಾಷ್ಯದ ನಿಲುವು. ಅಂಭಃ ಎಂದರೆ ನೀರು: ಮೂರನೆಯ ಮಂತ್ರದಲ್ಲಿ ಸಲಿಲವೆಂಬ ಪದಕ್ಕೆ ಇರುವ ಅರ್ಥವೇ ಇಲ್ಲಿಯೂ ಇರಬೇಕಷ್ಟೆ. ಗಹನವೂ ಗಭೀರವೂ ಆದ ಮತ್ತು ಹಾಲಿನಲ್ಲಿರುವ ನೀರಿನ ಹಾಗೆ ಇದ್ದೂ ಇಲ್ಲದಂತೆ ವ್ಯಾಪಿಸುವ ಮಾಯಾಶಕ್ತಿಯು ಸೃಷ್ಟಿ ಪೂರ್ವದಲ್ಲಿ ಹೊರಹೊಮ್ಮಿರಲಿಲ್ಲವೆಂದು ಭಾವ.

ಸೃಷ್ಟಿ ಪೂರ್ವದಲ್ಲಿ ಪರಬ್ರಹ್ಮಸ್ವರೂಪವೇ ಆದ ಚಿಚ್ಛಕ್ತಿಯು ಹೊರ ಹೊಮ್ಮಿಲ್ಲವಾದರೂ, ಎಂದರೆ ಬ್ರಹ್ಮವು ಶಕ್ತಿಯಿಂದ ವಿಶಿಷ್ಟವಾಗಿಲ್ಲವಾದರೂ, ಅದರಲ್ಲಿ ಅಭೇದವಾಗಿ ಸ್ವರೂಪತಃ ಚೈತನ್ಯವೇ ಇಲ್ಲವೆಂಬ ಭಾವನೆ ಬರದಿರ ಲೆಂದು ನಾಸದೀಯಸೂಕ್ತದ ಎರಡನೆಯ ಮಂತ್ರದಲ್ಲಿ "ಆನೀತ್ ಅವಾತಂ ಸ್ವಧಯಾ ತದೇಕಂ" ಎಂದು ಹೇಳಿದೆ. ಸ್ವಧಾ ಎಂದರೆ ಮಾಯೆಯೆಂದು ಸಾಯಣಭಾಷ್ಯದಲ್ಲಿ ಹೇಳಿದೆ. ವಾಯುವೂ ಇಲ್ಲದ ಸೃಷ್ಟಿ ಪೂರ್ವ ಸ್ಥಿತಿ ಯಲ್ಲಿ ಪರಬ್ರಹ್ಮವು ತದೇಕಂ ಎಂದರೆ ಅಭೇದವಾಗಿ ಚೈತನ್ಯದಿಂದ ಸ್ಫುರಿಸುತ್ತಿ ದ್ದಿತೆಂದು ಮಂತ್ರದಲ್ಲಿ ಹೇಳಿದೆ. ವಿಶಿಷ್ಟ-ಎಂಬ ಪದದಲ್ಲಿ ಭೇದಭಾವನೆಯಿದೆ. ಸೃಷ್ಟಿಗಾಗಿ ಶಕ್ತಿಯು ಹೊರಹೊಮ್ಮಿ ಪರಶಿವಬ್ರಹ್ಮದಲ್ಲಿ ಅ ಭೇ ದ ವಾ ದ ಚೈತನ್ಯ ಸ್ಫುರಣೆಯಿದ್ದಿತೆಂಬುದು ಎರಡನೆಯ ಮಂತ್ರದ ಭಾವ. ಈ ಸ್ಥಿತಿ ಯಲ್ಲಿ ಶಕ್ತಿಯು ಹೊರಹೊಮ್ಮದಿರುವುದರಿಂದ ಅದು "ಉಂಟೆನಿಸದು;" ಆದರೆ ಪರಬ್ರಹ್ಮದ ಸ್ವರೂಪವೇ ಆಗಿ "ತದೇಕಂ" ಎನ್ನುವಂತಿರುವುದರಿಂದ "ಇಲ್ಲೆ ನಿಸದು;" ಅರ್ಥಾತ್ ನಿಜಗುಣ ಶಿವಯೋಗಿಗಳ ಮಾತಿನಲ್ಲಿ "ಉಂಟೆನಿಸದೆ ಇಲ್ಲೆನಿಸದೆ, ಆಧೇಯವೀಮಾಯೆ ಆಧಾರದಲ್ಲಿ ಬೆರಸಿ ಬೇರಿಲ್ಲದಂತೆ" ಇರುವು ದೆನ್ನಬಹುದು.

ಇನ್ನು ಉಂಟೆನಿಸದ ಇಲ್ಲೆನಿಸದ ಉಂಟಿಲ್ಲೆನಿಸದ-ಎಂದರೆ ಸದಸದ್ ವಿಲಕ್ಷಣವಾದ ಶಕ್ತಿಗೆ ಆಧಾರವಾದ ಪರಬ್ರಹ್ಮವು ಸೃಷ್ಟಿಗೆ ಮೊದಲು "ಸದೇವ ಸೋಮ್ಯೇದಮಗ್ರ ಅಸೀತ್" ಎಂಬಂತೆ "ಸತ್" ಆಗಿದ್ದಿತು –

ಎನ್ನೋಣವೇ ? ಅಸ-ಭುವಿ (to exist) ಎಂಬಧಾತುವಿನಿಂದಾದ ಸತ್ ಎಂಬ ಪದಕ್ಕೆ ಇರುವಿಕೆ ಎಂದು ಅರ್ಥವಾಗುವುದು ; ಇರುವುದೆನ್ನುವುದು ಸೃಷ್ಟಿಯಾದುದರ ವಿಷಯವಾಗಿ ಹೇಳುವ ಮಾತು ; ಇದು ಸೃಷ್ಟಿ ಪೂರ್ವದ ಮಾತಲ್ಲ. "ಅಸದ್ವಾ ಇದಮಗ್ರ ಆಸೀತ್ ತತೋ ವೈಸದಜಾಯತ" ಎಂದು ತೈತ್ತಿರೀಯದಲ್ಲಿ ಹೇಳಿದಂತೆ—ಅಸತ್ತು ಮೊದಲಿತ್ತು ಅದರಿಂದ ಸತ್ತು ಆಯಿತು. ಎನ್ನೋಣವೆ? ಆಗ ಛಾಂದೋಗ್ಯದಲ್ಲಿ "ಕಥಂ ಅಸತಃ ಸತ್ ಜಾಯತ ?" ಎಂದು ಹೇಳಿದಂತೆ-ಅಸತ್-ಎಂದರೆ ಇಲ್ಲದುದರಿಂದ ಸತ್ ಎಂದರೆ ಇರುವುದು ಹೇಗೆ ಹುಟ್ಟುತ್ತದೆ ಎಂಬ ಪ್ರಶ್ನೆಯು ಏಳುತ್ತದೆ. ಆದುದರಿಂದ ಸದಸತ್ತು, ಬದುಕಿರುವುದು—ಸಾಯುವುದು—ಹಗಲು ರಾತ್ರಿ, ಮೊದಲಾದ ದ್ವಂದ್ವಗಳ ಕಲ್ಪನೆಯು ಆಚೆಯದು ಸೃಷ್ಟಿ ಪೂರ್ವ ಸ್ಥಿತಿ—ಎಂದಾಯಿತಾಗಿ, ಸೃಷ್ಟಿ ಪೂರ್ವದಲ್ಲಿ ಸೃಷ್ಟಿ ಕಾರಣವಾದ ಪರಬ್ರಹ್ಮವು "ಉಂಟೆನಿಸದಿಲ್ಲೆನಿಸದೆ" ಎಂದರೆ ಸದಸತ್ ಕಲ್ಪನೆಗೆ ಮೀರಿದುದಾಗಿದ್ದಿತೆನ್ನಬೇಕಾಗುವುದು. ಸಹಸ್ರಾಕ್ಷ ಪುರುಷನಿದ್ದು ಜಗತ್ತಿಗೆ ಕಾರಣನಾದನೆಂದು ಹೇಳುವ ಪುರುಷಸೂಕ್ತದ ಕಲ್ಪನೆಗೆ ಬಹುಮುಂದೆ ಹೋಗಿದೆ ನಾಸದೀಯ ಸೂಕ್ತದ ಸೃಷ್ಟಿ ಕಲ್ಪನೆ. ಅಲ್ಲಮಪ್ರಭುವಿನ ವಚನಗಳಂತೆ—

ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮನೇಮಜಪತಪವಿಲ್ಲದಂದು, ನಿಮ್ಮನಾರುಬಲ್ಲರು? ಪರಿಬ್ರಹ್ಮರಿಗೆ ಅಗೋಚರ, ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮ ನರಿಯವು; ಶಾಸ್ತ್ರ ಶ್ರುತಿಸ್ಮೃತಿಗಳು ನಿಮ್ಮ ನರಿಯವು. ಗಗನಕುಸುಮ ಪರಿಮಳದಿಂದತ್ತಲು ನಿಮ್ಮ ನಿಲುವನಾರು ಬಲ್ಲರು ?

ಆದಿ ಆಧಾರವಿಲ್ಲದಂದು ತ್ರೈಮಂಡಲ ನೆಲೆಗೊಳ್ಳದಂದು ಸುರಾಳ ನಿರಾಳವಿಲ್ಲದಂದು ಶೂನ್ಯ ನಿಶ್ಶೂನ್ಯವಿಲ್ಲದಂದು ಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ.

ನಾಸದೀಯ ಸೂಕ್ತದ ಪದ್ಯಾನುವಾದದಂತೆ

ಇರದಂದು ಸತ್ತೆನಿಪಸತ್ತೆನಿಪುದಾವುದುಂ
ಇರದಂದು ಲೋಕಗಳ್ ಮೇಲಿನಾವ್ಯೋಮಮುಂ
ಇರದಂದು ಆದರಾಚೆ ಪರಲೋಕವಾವುದಂ

ಇದ್ದಿತೆನ್ನಬಹುದಾದ, ಕಲ್ಪನಾತೀತವಾದ, ಗಗನಕುಸುಮಕ್ಕಿಂತಲೂ ಹೆಚ್ಚು ಅಧಿಕ ಕಲ್ಪನಾತೀತವಾದ, ಅದರ ಪರಿಮಳಕ್ಕಿಂತಲೂ ಮೀರಿದ ಕಲ್ಪನಾತೀತವಾದುದಾದ ತತ್ತ್ವವನ್ನು "ಇದ್ದೆಯಲ್ಲಾ ಇಲ್ಲದಂತೆ" ಎನ್ನಲೇಬೇಕು. ಮೇಲಿನದು ವಿಚಾರ ದೃಷ್ಟಿಗೆ ತೋರಿದ ತೋರಿಕೆ. ಇನ್ನು ಯೋಗ ದೃಷ್ಟಿಗೆ ಹೊಳೆದ ಹೊಳಪನ್ನು ನಿಜಗುಣಶಿವಯೋಗಿಗಳ ಅನುಭವವು ಹೀಗೆ ಚಿತ್ರಿಸುವುದು :

ಅದು ತೆರೆಯಡಗಿದ ಸಾಗರದಂತೆ । ಅದು ಮೇಘಂ ತೊಲಗಿದ ನಭದಂತೆ ।
ಮರುತನಡಗಿದೆಡೆಯಣ ಜೊಡರಂತೆ । ಎಲೆಯುದುರಿದ ತರುವಿನ ಪರಿಯಂತೆ ।
ನೆಲಸಿದ ಸುಖ ನಿದ್ರಿತ ನರನಂತೆ । ಮಂಜು ತೊಲಗಿ ಮಿರುಗುವ ರವಿಯಂತೆ ।
ಮಂಜೀರಾದಿಯಳಿದ ಪೊನ್ನಂತೆ । ಎಸೆವುದು ಸಚ್ಚಿನ್ಮಾತ್ರವೆ ತಾನಾಗಿ. ॥

ಪುರುಷ ಸೂಕ್ತದವರೆಗೆ ಸೃಷ್ಟಿ ಕಲ್ಪನೆಯಲ್ಲಿ ಆದ ಪ್ರಗತಿಯನು ಮೊದಲು ಹೇಳಲಾಯಿತು ; ಈಗ ಪುರುಷ ಸೂಕ್ತವೇ ಹಿನ್ನೆಲೆಯಾಗಿ ಉಳ್ಳ ಉಪನಿಷತ್ತುಗಳನ್ನು ವಿವರಿಸಲಾಯಿತು. ಪುರುಷ ಸೂಕ್ತದ ಅನಂತರ ನಾಸದೀಯ ಸೂಕ್ತದಲ್ಲಿ ಪೂರ್ಣತೆಯನ್ನು ಹೊಂದಿದ ಸೃಷ್ಟಿ ಕಲ್ಪನೆಯು ಎಷ್ಟು ಗಹನವಾದುದೆಂಬುದನ್ನು ತಿಳಿಯಲು ತಿಲಕರ ಗೀತಾ ರಹಸ್ಯದಲ್ಲಿ ಹೇಳಿರುವ ಮಾತುಗಳಿವು ಉಲ್ಲೇಖಾರ್ಹವಾಗಿವೆ: "ನಾಮ ರೂಪಾತ್ಮಕ ವಿವಿಧ ನೋಟಗಳ ಜಾಲದಲ್ಲಿಯೇ ನಾವು ತೊಡಕಿಕೊಂಡಿರವೆ, ಅದರ ರಚನೆಗೆ ಒಂದೇ ಒಂದಾದ ಮತ್ತು ಅಮೃತವಾದಂಥ ಯಾವುದೊಂದು ತತ್ತ್ವವು ಇದೆಯೆಂಬುದನ್ನು ಜ್ಞಾನ ದೃಷ್ಟಿಯಿಂದ ಗುರುತಿಸುವುದೇ ಎಲ್ಲ ವೇದಾಂತ ಶಾಸ್ತ್ರದ ಸಾರವು. ಮೇಲ್ಕಾಣಿಸಿದ ಸೂಕ್ತಿಯನ್ನು ರಚಿಸಿದ ಋಷಿಯ ಬುದ್ಧಿಯು ಈ ಸಾರವತ್ತಾದ ಬೆಣ್ಣೆಯ ಮುದ್ದೆಯನ್ನೂ ಒಂದೇ ಸಲಕ್ಕೆ ಜಪ್ಪನೆ ಹಾರಿ ಹಿಡಿದಿರುವುದನ್ನು ಲಕ್ಷಿಸಿದರೆ ಅವನ ಅಂತರ್ಜ್ಞಾನವು ಎಷ್ಟು ತೀವ್ರವಾಗಿತ್ತೆಂಬುದು ತಾನೇ ವ್ಯಕ್ತವಾಗುವುದು." ಸೃಷ್ಟಿ ಕಲ್ಪನೆಯ ಪ್ರಗತಿಯು ಪುರುಷಸೂಕ್ತದಲ್ಲಿ ಭವ್ಯತೆಯನ್ನು ಮುಟ್ಟಿದುದು ನಾಸದೀಯ ಸೂಕ್ತದಲ್ಲಿ ಪರಿಪೂರ್ಣತೆಯನ್ನು ಪಡೆದುದರಲ್ಲಿ ಸಂದೇಹವಿಲ್ಲ.

## ನಾರಾಯಣಪರಂಬ್ರಹ್ಮ

ಸೃಷ್ಟಿ ಸ್ಥಿತಿಲಯ ಕಾರಣರಾದ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಿಗೆ ಕಾರಣವಾದ ಪರಬ್ರಹ್ಮವನ್ನು ಶೈವರು ಪರಮಶಿವನೆಂದು ಕರೆಯುವಂತೆಯೇ ವೈಷ್ಣವರು ಮಹಾನಾರಾಯಣನೆಂದು ಕರೆಯುವರೆಂಬುದನ್ನು ಪೂರ್ವೋಕ್ತ ತ್ರಿಪಾದ್ವಿಭೂತಿ ಮಹಾನಾರಾಯಣೋಪನಿಷತ್ತಿನಿಂದ ತಿಳಿಸಲಾಯಿತು. ಶೈವರಿಗೆ ಹೇಗೋ ವೈಷ್ಣವರಿಗೂ ಹಾಗೆಯೇ ಪುರುಷ ಸೂಕ್ತವು ಮಾನ್ಯವೆಂಬುದು ಶೈವರಿಗೆ : ಮನವರಿಕೆಯಾಗಲೆಂದು ನಾರಾಯಣೀಯ ಯಾಜ್ಞಿಕ್ಯುಪನಿಷತ್ತಿನಿಂದ ಕೆಳಗಿನ ಮಂತ್ರ ಭಾಗಗಳನ್ನು ಉಲ್ಲೇಖಿಸಲಾಗಿದೆ. ಇದರಲ್ಲಿ ಹೇಳಿರುವ ಪರಬ್ರಹ್ಮವು ತ್ರಿಮೂರ್ತಿಗಳಿಗೆ ಅತೀತವಾದುದು

ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ
ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಂ
ನಾರಾಯಣಪರಂಬ್ರಹ್ಮ ತತ್ತ್ವಂ ನಾರಾಯಣಃ ಪರಃ
ಸಬ್ರಹ್ಮಾ ಸಶಿವ ಸ್ಸಹರಿಸ್ಸೇಂದ್ರ ಸ್ಸೋಽಕ್ಷರಃ ಪರಮಸ್ಸ್ವರಾಟ್
ಈಶಾನಸ್ಸರ್ವ ವಿದ್ಯಾನಾಂ ಈಶ್ವರಃ ಸರ್ವ ಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾಶಿವೋಮೇ ಅಸ್ತು
ಸದಾಶಿವೋಂ ॥ ನಮೋ ಹಿರಣ್ಯಬಾಹವೇ...ಹಿರಣ್ಯಪತಯೇ
ಅಂಬಿಕಾಪತಯೇ ಉಮಾಪತಯೇ ಪಶುಪತಯೇ ನಮೋ ನಮಃ
ತ್ವಂಯಜ್ಞಸ್ತ್ವಂ ವಷಟ್ಕಾರಸ್ತ್ವಮಿಂದ್ರ ಸ್ತ್ವಂರುದ್ರಸ್ತ್ವಂ
ವಿಷ್ಣುಸ್ತ್ವಂ ಬ್ರಹ್ಮ ತ್ವಂ ಪ್ರಜಾಪತಿಃ ॥

ಈ ಆಧಾರಗಳಿಂದ ಶೈವ ವೈಷ್ಣವರು ತಿಳಿಯಬೇಕಾದುದೇನೆಂದರೆ— ಪುರಾಣಗಳಲ್ಲಿ, ಶಿವನಿಗಿಂತ ವಿಷ್ಣು ಹೆಚ್ಚು ಎಂದೋ ವಿಷ್ಣುವಿಗಿಂತ ಶಿವನು ಹೆಚ್ಚು ಎಂದೋ ಕಥೆಗಳು ಹುಟ್ಟುವುದಕ್ಕೆ ಮೊದಲು "ದೇವನೊಬ್ಬ ನಾಮ ಹಲವು ಎಂಬುವೇ ನಂಬಲ್ಪಟ್ಟದ್ದಿತು. ನಾರಾಯಣನೆಂದೋ ಶಿವನೆಂದೋ ಒಬ್ಬನನ್ನೇ ಕರೆಯುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಡಾ॥ ಭಂಡಾರ್ಕರವರು

ಶ್ವೇತಾಶ್ವತರೋಪನಿಷತ್ತಿನ ವಿಷಯದಲ್ಲಿ ಹೇಳಿರುವ ಈ ಮಾತುಗಳು ಮೇಲೆ ಕಂಡ ವೈಷ್ಣವ ಉಪನಿಷತ್ತುಗಳಿಗೂ ಅನ್ವಯಿಸುವುವು :

There is no indication, whatever that these names have been given for the purpose of raising, Rudra-Siva to the supreme god-head to the exclusion of another god. Names indicative of Rudra appear to have been used, since he was invested with a personality perceived and acknowledged by all. The upanishad therefore is not a sectarian treatise like others promulgated in later times and is often quoated by Sankaracharya, Ramanuja and other writers of different schools and not by those of one school only.

ಪುರುಷಸೂಕ್ತೋಕ್ತ ತ್ರೀಮೂರ್ತಿಗಳಿಗೂ ಅತೀತವಾದ ಪರಬ್ರಹ್ಮವನ್ನು ಶೈವರೂ, ವೈಷ್ಣವರೂ ಅವರವರ ಭಕ್ತಿಗೆ ಅಳವಡುವ ಹೆಸರಿನಲ್ಲಿ ಧ್ಯಾನಿಸಬಹುದು.

ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡಾನೋ

ಎಂದು ಹಾಡಿರುವ ಪುರಂದರದಾಸರೇ ಹೀಗೂ ಹಾಡಿರುವರು :

ಕಂಡೆ ಕರುಣಾನಿಧಿಯಾ ಗಂಗೆಯಮಂಡೆಯೊಳಿಟ್ಟ ದೊರೆಯ

ಇದೊಂದೇ ಬಾರಿಯಲ್ಲ; ಮತ್ತೊಂದು ಕಡೆ ಪುರಂದರದಾಸರು

ತಿರುಪತಿ ವೆಂಕಟ ರಮಣ । ನಿನಗೇಕೆ ಬಾರದು ಕರುಣ

ಎಂದು ಹಾಡಿರುವಂತೆಯೇ ಪಾರ್ವತೀ ರಮಣನನ್ನು ಪ್ರಾರ್ಥಿಸಿರುವರು.

ಚಂದ್ರಚೂಡ ಶಿವಶಂಕರ ಪಾರ್ವತಿರಮಣ ನಿನಗೆ ನಮೋ

ಮಹಂತ ಶಿವಯೋಗಿಗಳು ಹೇಳಿರುವಂತೆ :

ಹರಿಯ ಭಕ್ತರಿಗೆ ಹರಿ, ಹರನ ಭಕ್ತರಿಗೆ ಹರ ।
ನರರೇನು ಭಾವಿಸುವರದರಂತೆ ತೋರುವನು ॥

ಮುಪ್ಪಿನ ಷಡಕ್ಷರಿಗಳ ಉಪದೇಶವಿದು ಎಲ್ಲರಿಗೂ ಮನವರಿಕೆಯಾಗಬೇಕು :

ಅವರವರ ದರುಶನಕೆ ಅವರವರ ವೇಷದಲಿ । ಅವರವರಿಗೆಲ್ಲ ಗುರು ನೀನೊಬ್ಬನೇ ।
ಅವರವರ ಭಾವಕ್ಕೆ ಅವರವರ ಪೂಜೆಗಂ । ಅವರವರಿಗೆಲ್ಲ ದೇವ ನೀನೊಬ್ಬನೇ ॥

ಇತಿ ಶಿವಮಚ್ಯುತಂ

# ಈ ಗ್ರಂಥಕರ್ತರ ಇತರ ಗ್ರಂಥಗಳು

ಈಶಾವಾಸ್ಯೋಪನಿಷತ್ ಪ್ರಕಾಶ (ಬೆಲೆ ರೂ. ೨-೭೫)

ಚಿತ್ರದುರ್ಗ ಜಗದ್ಗುರು ಶ್ರೀ ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳು— ಈ ಗ್ರಂಥವು ಈ ಉಪನಿಷತ್ತಿನ ಭಾಷ್ಯಗಳನ್ನೆಲ್ಲ ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗಿರುವುದು. ಇಂತಹ ವಿಮರ್ಶಾತ್ಮಕ ಗ್ರಂಥಗಳು ಬಹಳ ವಿರಳ.

ಶ್ರೀ ಮಹಾರಾಜಗುರು ಶ್ರೀಗುರು ಬ್ರಹ್ಮತಂತ್ರ ಪರಕಾಲಸ್ವಾಮಿ ಮಠ—ಶ್ರೀಗಳ ಮೆಚ್ಚುಗೆಯನ್ನು ತಿಳಿಸುವುದು. ಇಂತಹ ವಿಚಾರಪೂರಿತ ವೇದಾಂತ ಗ್ರಂಥವು ಕನ್ನಡ ಜನರಿಗೆ ಪ್ರಾಪ್ತವಾದುದು ಸುಯೋಗ.

ಕೇನೋಪನಿಷತ್ ತಾತ್ಪರ್ಯ ನಿರ್ಣಯ (ಬೆಲೆ ರೂ. ೨-೭೫)

ಚಿತ್ರದುರ್ಗ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿ ಮಹಾಸನ್ನಿಧಿ—ತುಲನಾತ್ಮಕ ದೃಷ್ಟಿಯಿದೆ, ಸಮನ್ವಯ ಭಾವನೆಯಿದೆ; ಅಭ್ಯಾಸಪೂರ್ಣ ಪರಿಪಕ್ವ ವಿಚಾರಗಳ ಸ್ವತಂತ್ರ ಪೈಖರಿಯಿದೆ.

Dr. D. V. ಗುಂಡಪ್ಪನವರು—ತತ್ತ್ವಜಿಜ್ಞಾಸುಗಳಿಗೆಗ್ರಂಥ ಪರಮೋಪಕಾರ.

ಸರ್ವದರ್ಶನಶೀರ್ಷ ಶ್ರೀ ವೈ. ನಾಗೇಶಶಾಸ್ತ್ರಿಗಳು—ತುಲನಾತ್ಮಕ ವಿಮರ್ಶೆಯಿಂದ ಬರೆಯುವ ಮಹತ್ಕಾರ್ಯದಲ್ಲಿ ಶ್ರೀಯುತ ಮಲ್ಲಪ್ಪನವರೇ ಮೊದಲಿಗರು.

ಸಾಯಣಭಾಷ್ಯೋಪೇತ ನಾಸದೀಯ ಸೂಕ್ತ

ಉಪಕುಲಪತಿ ಪದ್ಮಶ್ರೀ ಡಾ॥ ಗೋಕಾಕರು—ಅವರಲ್ಲಿ ನೆಲೆಗೊಂಡಿದ್ದ ಜಿಜ್ಞಾಸೆ ಹಾಗೂ ವಿದ್ವತ್ತು ವೇದ, ಉಪನಿಷತ್ತು, ವಿವಿಧ ಭಾಷ್ಯ ಹಾಗೂ ವಚನ ಸಾಹಿತ್ಯದ ಆಳದಲ್ಲಿ ಮುಳುಗೆದ್ದು ಚಿಂತನೆಯ ಅಣಿಮುತ್ತುಗಳನ್ನು ಮೇಲಕ್ಕೆ ತಂದಿದೆ.

ಪ್ರಾಚ್ಯ ಮಹಾವಿದ್ಯಾಲಯದ ಅಧ್ಯಕ್ಷರಾದ ವಿದ್ಯಾಲಂಕಾರ ಶ್ರೀ ಎಸ್. ಕೆ. ರಾಮಚಂದ್ರರಾಯರು—ಪ್ರತಿಬೋಧದಂತಹ ಕ್ಲಿಷ್ಟ ಸಂದರ್ಭಗಳನ್ನು ಸುಬೋಧವಾಗಿ ವಿವರಿಸುವ ಜಾಣ್ಮೆ ಅವರಿಗಿರುವುದು. ಅವರ ಈ ವೈದಿಕಸೇವೆಗೆ ಕಳಶ ವಿಟ್ಟಂತೆ ಈಗ ನಾಸದೀಯ ಸೂಕ್ತದ ವಿವೇಚನೆ ಹೊರಗೆ ಬಂದಿದೆ.

Dr. M. V. Krishna Rao—Many of the terms of the great song would have remained recondite and unintelligible without your comparative study.

Sri K. Guru Dutt. I.A.S.—A little master piece.

**ವಚನೋಪನಿಷತ್ತು—**

ಶ್ರೀ ಚಿತ್ರದುರ್ಗ ಜಗದ್ಗುರು ಮಹಾ ಸನ್ನಿಧಿ—ವೇದವಾಙ್ಮಯದಿಂದ ವಚನ ವಾಙ್ಮಯದವರೆಗೆ ಆಧ್ಯಾತ್ಮಿಕ ಪ್ರಗತಿಯನ್ನು ಸಪ್ರಮಾಣವಾಗಿ ಸುಂದರವಾಗಿ ನಿರೂಪಿಸಿದೆ.

ಶ್ರೀಕಂಠ ಶಿವಾಚಾರ್ಯರು ವೀರಶೈವರೇ—ಬೆಲೆ ೭೫ ಪೈಸೆ.

ಜಗದ್ಗುರು ಶಿವಲಿಂಗೇಶ್ವರ ಮಹಾಸನ್ನಿಧಿ—ಶ್ರೀಕಂಠಭಾಷ್ಯವನ್ನೂ ಶ್ರೀಕರ ಭಾಷ್ಯವನ್ನೂ ಹಾಗೂ ಕ್ರಿಯಾ ಸಾರವನ್ನೂ ಕೂಲಂಕಷವಾಗಿ ವಿಮರ್ಶಿಸಿ, ಅವುಗಳಲ್ಲಿ ರುವ ಬಹ್ವಂಶ ವೀರಶೈವ ಸಾದೃಶ್ಯವನ್ನು ಕಂಡುಹಿಡಿದು ಶ್ರೀಕಂಠಭಾಷ್ಯವು ವೀರಶೈವ ಭಾಷ್ಯವೆಂದೂ ಶ್ರೀಕಂಠ ಶಿವಾಚಾರ್ಯರು ವೀರಶೈವರೆಂದು ನಿರ್ಣಯವನ್ನಿತ್ತಿರುವುದು ಪ್ರಶಂಸನೀಯವಾಗಿದೆ.

ರಾಜಸೇವಾಸಕ್ತ ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು ಶ್ರೀಕರ ಭಾಷ್ಯಕ್ಕೂ ಶ್ರೀಕಂಠ ಭಾಷ್ಯಕ್ಕೂ ಸಮನ್ವಯ ಮಾಡಿರುವುದರಲ್ಲಿ ತೋರಿರುವ ಪಾಂಡಿತ್ಯ ಪೂರ್ಣವಾದ ಕೌಶಲ್ಯವು ಶ್ಲಾಘ್ಯವಾಗಿದೆ.

ವೀರಶೈವದ ಉಗಮ ಮತ್ತು ಪ್ರಗತಿ—ಪ್ರಕಟಣೆಗೆ ಸಿದ್ಧವಾಗಿದೆ.

**Prof. Y. Yamunacharya, M. A.**—An epoch-making work in so far as it throws considerable light on all aspects of Indian religion and development.

**Rajasevasakta Padma Sri C. K. Venkataramiah**—You have laid the entire Kannada country under a deep debt of gratitude.

ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾಸನ್ನಿಧಿ - ಗ್ರಂಥವು ಪಠನೀಯವಾಗಿದೆ, ಮನನೀಯವಾಗಿದೆ, ಇತಿಹಾಸ ಸಂಶೋಧಕರಿಗೆ ವಿಪುಲವಾದ ಸಂಪತ್ತಿದೆ. ತತ್ತ್ವವೇತ್ತರಿಗೆ ಸತ್ಯದ ದರ್ಶನವಿದೆ. ಧರ್ಮಾನುಯಾಯಿಗಳಿಗೆ ತಮ್ಮದೆನ್ನುವ ಹೆಮ್ಮೆಯಿದೆ; ಪುಣ್ಯವಿದೆ, ಪಣ್ಯವಿದೆ; ಅಮೃತದ ಗುಟುಕುಗಳಿವೆ. ವಿಶ್ವಸಾಹಿತ್ಯದ ಪ್ರಪಂಚದಲ್ಲಿ ತಮ್ಮ ಗ್ರಂಥವು ಅಜರಾಮರವಾಗಿ ಬಾಳಬಲ್ಲ ಯಶಃಪೂರ್ಣಕೃತಿಯಾಗಿದೆ.

ಶ್ರೀಮತಾಚಾರ್ಯ ಭಾಷ್ಯೋಪೇತ ಮಾಂಡೂಕ್ಯೋಪನಿಷತ್ತು—ಮುದ್ರಣದಲ್ಲಿದೆ.



---

ಓರಿಯಂಟ್ ಪವರ್ ಪ್ರೆಸ್, ಲಾಲ್‌ಬಾಗ್ ರೋಡ್, ಬೆಂಗಳೂರು-27

